# ಅಣ್ಣ ಬಸವಣ್ಣ



## ವಚನಗಳು

ಶ್ರೀ ರಾಧಾಕೃಷ್ಣ ಪ್ರಕಾಶನ

# ಅಣ್ಣ ಬಸವಣ್ಣನವರ ವಚನಗಳು

-: ಸಂಪಾದಕರು :-

**ಆರ್. ಆರ್. ಕೆ. ವರ್ಮಾ**



**ಬೆಲೆ ರೂ. 10/-**

**ಶ್ರೀ ರಾಧಾಕೃಷ್ಣ ಪ್ರಕಾಶನ**

ನಂ. 121, 'ಹೃದಯ', 1ನೇ ಮುಖ್ಯರಸ್ತೆ

ರಾಮಕೃಷ್ಣ ಬಡಾವಣೆ, ತ್ಯಾಗರಾಜನಗರ

ಬೆಂಗಳೂರು - 560 028 ಫೋನ್ : 080-26764891

'Anna Basavanna Vachanagalu' Collected by RRK Varma, Published by Sri Radhakrishna Prakashana, # 121, "HRUDAYA", 1st Main, T.R. Nagar, Bangalore - 560 028
Ph : 080-26764891

Pages : 80
First Edition : 2004
Price Rs. 10/-



Printed at :
**Sri Radhakrishna Prakashana**
Bangalore - 28



ಮೇರುಗುಣವನರಸುವುದೆ ಕಾಗೆಯಲ್ಲಿ ?
ಪರುಷ ಗುಣವನರಸುವುದೆ ಕಬ್ಬುನದಲ್ಲಿ ?
ಸಾಧು ಗುಣವನರಸುವುದೆ ಅವಗುಣಿಯಲ್ಲಿ ?
ಚಂದನಗುಣವನರಸುವುದೆ ತರುಗಳಲ್ಲಿ ?
ಸರ್ವಗುಣಸಂಪನ್ನ ಲಿಂಗವೇ,
ನೀನೆನ್ನಲ್ಲಿ ಅನಗುಣವನರಸುವುರೆ,
ಕೂಡಲ ಸಂಗಮದೇವ ?

***

ಹೊಲಬುಗೆಟ್ಟ ಶಿಶು ತನ್ನ ತಾಯ ಬಯಸುವಂತೆ,
ಬಳಿದಪ್ಪಿದ ಪಶು ತನ್ನ ಹಿಂಡನರಸುವಂತೆ,
ಬಯಸುತ್ತಿರ್ದೆನಯ್ಯಾ ನಿಮ್ಮ ಶರಣರ ಬರವನು,
ಬಯಸುತ್ತಿರ್ದೆನಯ್ಯಾ ನಿಮ್ಮ ಶರಣರ ಬರವನು,
ಬಯಸುತ್ತಿರ್ದೆನಯ್ಯಾ ನಿಮ್ಮ ಭಕ್ತರ ಬರವನು ;
ದಿನಕರನುದಯಕ್ಕೆ ಕಮಳ ವಿಕಸಿತವಾದಂತೆ
ಎನಗೆ ನಿಮ್ಮ ಶರಣರ ಬರವು, ಕೂಡಲ ಸಂಗಮದೇವಾ.

***

ಬೆಳೆ ಭೂಮಿಯಲೊಂದು ಪ್ರಳಯದ ಕಸ ಹುಟ್ಟಿ
ತಿಳಿಯಲೀಯದು ಎಚ್ಚರಲೀಯದು !
ಎನ್ನವಗುಣವೆಂಬ ಕಳೆಯ ಕಿತ್ತು ಸಲಹಯ್ಯ ಲಿಂಗತಂದೆ :
ಸುಳಿದೆಗೆದು ಬೆಳೆವೆನು ಕೂಡಲ ಸಂಗಮದೇವಾ.

***

ಚಂದ್ರಮನಂತೆ ಕಳೆ ಸಮನಿಸಿತ್ತೆನಗೆ
ಸಂಸಾರವೆಂಬ ರಾಹು ಸರ್ವಗ್ರಾಸಿಯಾಗಿ ನುಂಗಿತ್ತಯ್ಯಾ !
ಇಂದೆನ್ನ ದೇಹಕ್ಕೆ ಗ್ರಹಣವಾಯಿತು,
ಇನ್ನೆಂದಿಗೆ ಮೋಕ್ಷವಹುದೋ ಕೂಡಲಸಂಗಮದೇವ

ಹುಟ್ಟೆಂದು ಲೋಕದಲ್ಲಿ ಹುಟ್ಟಿಸಿ ಇಳಿಯಬಿಟ್ಟೊಡೆ
ನಿಮ್ಮ ನಗುವರಯ್ಯಾ.
ಶಿವ ಬಟ್ಟೆಯೊಳೆನ್ನನು ಇರಿಸಯ್ಯಾ ಹರನೇ.
ಹೊಲಬುಗೆಟ್ಟೆನು ಬಟ್ಟೆಯ ತೋರಯ್ಯಾ.
ಹುಯ್ಯಲಿಟ್ಟೆನು : ಗಣಂಗಳು ಕೇಳಿರಯ್ಯಾ.
ಕೂಡಲ ಸಂಗಮದೇವಯ್ಯನೆನ್ನ ಕಾಡಿಹನಯ್ಯಾ.

***

ಬೆದಕದಿರು ಬೆದಕದಿರು ಬೆದಕಿದೊಡೆ ಹುರುಳಿಲ್ಲ
ಚಿತ್ತ ರಟ್ಟೆಯ ಕಾಯಲ್ಲಿ ಮತ್ತೇನನರಸುವಿರಯ್ಯಾ ?
ನಿಮ್ಮುತ್ತಮಿಕೆಯನೇ ಪೂರಯಿಸುವುದು.
ಕೂಡಲ ಸಂಗಮದೇವಾ.

***

ಆರು ಮುನಿದು ನಮ್ಮನೇನು ಮಾಡುವರು
ಊರು ಮುನಿದು ನಮ್ಮನೆಂತು ಮಾಡುವರು
ನಮ್ಮ ಕುನ್ನಿಗೆ ಕೂಸ ಕೊಡಬೇಡ
ನಮ್ಮ ಸೊಣಗಂಗೆ ತಣಿಗೆಯಲ್ಲಿಕ್ಕಬೇಡ
ಆನೆಯ ಮೇಲೆ ಹೋಹವನ ಶ್ವಾನ ಕಚ್ಚಬಲ್ಲುದೇ
ನಮಗೆ ನಮ್ಮ ಕೂಡಲ ಸಂಗಯ್ಯನುಳ್ಳನಕ್ಕರ ?

***

ಸಂಸಾರವೆಂಬ ಸರ್ಪ ಮುಟ್ಟಲು
ಪಂಚೇಂದ್ರಿಯ ವಿಷಯವೆಂಬ ವಿಷದಿಂದ
ಅನು ಮುಂದುಗೆಟ್ಟೆನಯ್ಯಾ.
ಆನು ಹೊರಳಿ ಬೀಳುತ್ತಿರ್ದೆನಯ್ಯಾ.
ಓಂ ನಮ: ಶಿವಾಯ. ಎಂಬ ಮಂತ್ರವ
ಜಪಿಸುತ್ತಿರ್ದೆನಯ್ಯಾ ಕೂಡಲ ಸಂಗಮದೇವಾ.



ಪರರ ಚಿಂತೆ ನಮಗೇಕಯ್ಯಾ -
ನಮ್ಮ ಚಿಂತೆ ನಮಗೆ ಸಾಲದೆ ?
ಕೂಡಲ ಸಂಗಯ್ಯ ಒಲಿದಾನೋ ಒಲಿಯನೋ
ಎಂಬ ಚಿಂತೆ ಹಾಸಲುಂಟು, ಹೊದೆಯಲುಂಟು ॥

***

ತನುವ ಕೊಟ್ಟೆನೆಂದು ನುಡಿದು
ಗುರುವಚನಕ್ಕೆ ದೂರವಾದೆ :
ಮನವ ಕೊಟ್ಟೆನೆಂದು ನುಡಿದು
ಲಿಂಗ ಮುಖಕ್ಕೆ ದೂರವಾದೆ :
ಧನವ ಕೊಟ್ಟೆನೆಂದು ನುಡಿದು
ಜಂಗಮ ಮುಖಕ್ಕೆ ದೂರವಾದೆ,
ಕೂಡಲಸಂಗಮದೇವಾ
ನಿಮಗೆ ಮಾಡಿದೆನೆಂದು ನುಡಿದು
ಕೆಟ್ಟಕೇಡಿಂಗೆ ಕಡೆಯಿಲ್ಲ.

***

ಒಲೆ ಹತ್ತಿಯುರಿದೊಡೆ ನಿಲಬಹುದಲ್ಲದೆ
ಧರೆ ಹತ್ತಿಯುರಿದೊಡೆ ನಿಲುಬಾರದು.
ಏರಿ ನೀರುಣ್ಬೊಡೆ, ಬೇಲಿ ಕೆಯ್ಯ ಮೇವೊಡೆ,
ನಾರಿ ತನ್ನ ಮನೆಯಲ್ಲಿ ಕಳುವೊಡೆ
ಇನ್ನಾರಿಗೆ ದೂರುವೆ ಕೂಡಲಸಂಗಮದೇವಾ ?

***

ಮುನ್ನ ಮಾಡಿದ ಪಾಪ
ಬೆನ್ನ ಬಿಡದನ್ನಕ್ಕ ಇನ್ನು ಬಯಸಿದರುಂಟೆ?
ಭಕ್ತಿಯುಳ್ಳವರ ನೋಡಿ ನೋಡಿ ಬಯಸಿದರುಂಟೇ
ಕೂಡಲಸಂಗಮದೇವರಲ್ಲಿ ಮುನ್ನ ವರವ ಪಡೆಯದನ್ನಕ್ಕ?

ಎನ್ನ ಚಿತ್ತವು ಅತ್ತಿ ಹಣ್ಣು ನೋಡಯ್ಯ !
ವಿಚಾರಿಸಿದೊಡೇನೂ ಹುರುಳಿಲ್ಲವಯ್ಯಾ !
ಪ್ರಪಂಚದ ಡಂಬಿನಲ್ಲಿ
ಎನ್ನನೊಂದು ರೂಹು ಮಾಡಿ ನೀವಿರಿಸಿದಿರಿ
ಕೂಡಲಸಂಗಮದೇವಾ.

***

ಆವಾವ ಭಾವದಲಿ ಕೂಡಿಹೆವೆಂಬರ
ಬಾಗಿಲ ತೋರಯ್ಯ.
ತನುವನೊಪ್ಪಿಸಿದವರ, ಮನವನೊಪ್ಪಿಸಿದವರ,
ಧನವನೊಪ್ಪಿಸಿದವರ ಬಾಗಿಲ ತೋರಯ್ಯ.
ಇವನೆಲ್ಲವನೊಪ್ಪಿಸಿ
ಜಂಗಮವನೆನ್ನವರೆನ್ನವರೆನ್ನವರೆಂಬವರ
ಕೆರಹ ಹೊತ್ತಿರಿಸೆನ್ನನು ಕೂಡಲಸಂಗಮದೇವಾ.

***

ಜನ್ಮ ಜನ್ಮಕ್ಕೆ ಹೋಗಲೀಯದೆ
'ಸೋಹಂ' ಎಂದೆನಿಸದೆ
'ದಾಸೋಹಂ' ಎಂದೆನಿಸಯ್ಯಾ
ಲಿಂಗ ಜಂಗಮದ ಪ್ರಸಾದವ ತೋರಿ ಬದುಕಿಸಯ್ಯಾ
ಕೂಡಲಸಂಗಮದೇವಾ

***

ಒಲೆ ಹತ್ತಿಯುರಿದೊಡೆ ನಿಲ್ಲಬಹುದಲ್ಲದೆ
ಧರೆ ಹತ್ತಿಯುರಿದೊಡೆ ನಿಲ್ಲಲಾಗದು
ಏರಿ ನೀರುಂಬೊಡೆ ಬೇಲಿ ಕೆಯ್ಯ ಮೇವೊಡೆ,
ನಾರಿ ತನ್ನ ಮನೆಯಲ್ಲಿ ಕಳುವೊಡೆ, ತಾಯಿಯ ಮೊಲೆವಾಲು
ನಂಜಾಗಿ ಕೊಲುವೊಡೆ ಇನ್ನಾರಿಗೆ ದೂರುವೆ, ಕೂಡಲಸಂಗಮ ದೇವಾ?



ಸಂಸಾರವೆಂಬುದೊಂದು ಗಾಳಿಯ ಸೊಡರು
ಸಿರಿಯೆಂಬುದೊಂದು ಸುತೆಯ ಮಂದಿ ಕಂಡಯ್ಯಾ !
ಇದ ನೆಚ್ಚಿ ಕೆಡಬೇಡ ಸಿರಯೆಂಬುದ !
ಮರೆಯದೆ ಪೂಜಿಸು ಕೂಡಲಸಂಗಮದೇವನ.

***

ಕಾಲಲಿ ಕಟ್ಟಿದ ಗುಂಡು, ಕೊರಳಲಿ ಕಟ್ಟಿದ ಬೆಂಡು
ತೇಲಲೀಯದು ಗುಂಡು, ಮುಳುಗಲೀಯದು ಬೆಂಡು
ಇಂತಪ್ಪ ಶರಧಿಯ ದಾಂಟಿಸಿ
ಕಾಲಾಂತಕನೆ ಕಾಯೋ ಕೂಡಲಸಂಗದೇವ

***

ಎನ್ನ ಚಿತ್ತವು ಅತ್ತಿಯ ಹಣ್ಣು ನೋಡಯ್ಯ,
ವಿಚಾರಿಸಿದೊಡೇನೂ ಹುರುಳಿಲ್ಲವಯ್ಯಾ,
ಪ್ರಪಂಚಿನ ಡಂಬಿನಲ್ಲಿ ಎನ್ನನೊಂದು
ರೂಹಮಾಡಿ ನೀವಿರಿಸಿದಿರಿ, ಕೂಡಲಸಂಗಮದೇವಾ

***

ಎನ್ನ ನಡೆಯೊಂದು ಪರಿ ಎನ್ನ ನುಡಿಯೊಂದು ಪರಿ,
ಎನ್ನೊಳಗೇನೂ ಶುದ್ಧವಿಲ್ಲ ನೋಡಯ್ಯಾ,
ನುಡಿಗೆ ತಕ್ಕ ನಡೆಯ ಕಂಡೊಡೆ
ಕೂಡಲ ಸಂಗಮನೊಳಗಿರ್ಪನಯ್ಯಾ

***

ಮುಂಗೈಯ ಕಂಕಣಕೆ ಕನ್ನಡಿಯ ತೋರುವಂತೆ
ಎನ್ನ ಮನವು ನಿಧಾನವನೊಲ್ಲದೆ ಜಲಗು ಮುಚ್ಚಿತ್ತು ನೋಡಾ!
ನಾಯಿಗೆ ನಾರಿವಾಣವಕ್ಕುವುದೆ ಕೂಡಲ ಸಂಗಮದೇವಾ?

ಮಸಿಯನೇಸು ಕಾಲ ಬೆಳಗಿದರೆ, ಬಿಳಿದಾಗಬಲ್ಲುದೆ ?
ಕರ್ಮಸ್ಥಿತಿ ಬೆನ್ನ ಬಿಡದು.
ಅನಂತಕೋಟಿ ಸನ್ಮಾನವ ಮಾಡಿದರೇನು ?
ನಿಮಿಷದುದಾಸೀನ ಕೆಡಿಸಿತ್ತು !
ನಿಮ್ಮ ನಂಬಿಯೂ ನಂಬದ ಡಂಭಕ ನಾನಯ್ಯ
ಕೂಡಲಸಂಗಮದೇವಾ.

***

ಮಡಕೆ ದೈವ, ಮೊರ ದೈವ, ಬೀದಿಯ ಕಲ್ಲು ದೈವ
ಹಣಿಗೆ ದೈವ, ಬಿಲ್ಲನಾರಿ ದೈವ ಕಾಣಿರೋ !
ಕೊಳಗ ದೈವ, ಗಿಣ್ಣಿಲು ದೈವ ಕಾಣಿರೋ !
ದೈವದೈವವೆಂದು ಕಾಲಿಡಲಿಂಬಿಲ್ಲ !
ದೇವನೊಬ್ಬನೆ ಕೂಡಲ ಸಂಗಮದೇವ ॥

***

ಸೂರ್ಯನುದಯ ತಾವರೆಗೆ ಜೀವಾಳ,
ಚಂದ್ರಮನುದಯ ನೈದಿಲೆಗೆ ಜೀವಾಳ,
ಕೂಪರ ಠಾವಿನಲ್ಲಿ ಕೂಟ ಜೀವಾಳ,
ಒಲಿದ ಠಾವಿನಲ್ಲಿ ನೋಟ ಜೀವಾಳವಯ್ಯ
ಕೂಡಲಸಂಗನ ಶರಣರ ಬರವೆನಗೆ
ಪ್ರಾಣ ಜೀವಾಳವಯ್ಯ

***

ಕೊಂಬಿನ ಮೇಲಣ ಮರ್ಕಟನಂತೆ
ನಿಂದಲ್ಲಿ ನಿಲ್ಲಲೀಯದೆನ್ನ ಮನವು
ಹೊಂದಿದಲ್ಲಿ ಹೊಂದಲೀಯದೆನ್ನ ಮನವು!
ಕೂಡಲ ಸಂಗಮದೇವಾ, ನಿಮ್ಮ ಚರಣ ಕಮಲದಲ್ಲಿ
ಭ್ರಮನಾಗಿರಿಸು ನಿಮ್ಮ ಧರ್ಮ.



ನಾದಪ್ರಿಯ ಶಿವನೆಂಬರು,
ನಾದಪ್ರಿಯ ಶಿವನಲ್ಲವಯ್ಯ.
ವೇದಪ್ರಿಯ ಶಿವನೆಂಬರು,
ವೇದಪ್ರಿಯ ಶಿವನಲ್ಲವಯ್ಯಾ.
ನಾದವ ಮಾಡಿದ ರಾವಳಂಗೆ ಅರೆಯಾಯುಷ್ಯವಾಯಿತ್ತು :
ವೇದವನೋದಿದ ಬ್ರಹ್ಮನ ಶಿರ ಹೋಯಿತ್ತು !
ನಾದಪ್ರಿಯನೂ ಅಲ್ಲ, ವೇದಪ್ರಿಯನೂ ಅಲ್ಲ
ಭಕ್ತಿಪ್ರಿಯ ನಮ್ಮ ಕೂಡಲಸಂಗಮದೇವ.

***

ಎನಿಸು ಕಾಲ ಕಲ್ಲು ನೀರೊಳಗಿದ್ದಡೇನು
ನೆನೆದು ಮೃದುವಾಗಬಲ್ಲುದೇ ?
ಎನಿಸು ಕಾಲ ನಿಮ್ಮ ಪೂಜಿಸಿ ಏವೆನಯ್ಯ
ಮನದಲ್ಲಿ ದೃಢವಿಲ್ಲದನ್ನಕ್ಕ ?
ನಿಧಾನವ ಕಾಯ್ದಿರ್ದ ಬೆಂತರನಂತೆ -
ಅದರ ಬಿಧಿ ಎನಗಾಯಿತ್ತು ಕೂಡಲ ಸಂಗಮದೇವ ॥

***

ತನ್ನಿಚ್ಛೆಯ ನುಡಿದರೆ ನುಚ್ಚುವುದೀಮನವು
ಇದಿರಿಚ್ಛೆಯ ನುಡಿದರೆ ಮೆಚ್ಚದೀ ಮನವು,
ಕೂಡಲ ಸಂಗನ ಶರಣರ ನಚ್ಚದ ಮನವು ಕಿಚ್ಚಿನೊಳಗಿಕ್ಕುವೆ.

***

ಮುನಿದೆಯಾದೊಡೆ ಒಮ್ಮೆ ಜರಿದೊಡೆ ಸಾಲದೆ?
ಅಕಟಕಟಾ! ಮದನಂಗೆ ಮಾರುಗೊಡುವರೆ?
ಹಗೆಗೆ ಮಾರುಗೊಟ್ಟು ನಿನ್ನವರನೊಪ್ಪಿಸುವರೆ
ಕೂಡಲ ಸಂಗಮದೇವಾ ?

ಅರಸರ ಮನೆಯಲ್ಲಿ ಅರಸಿಯಾಗಿಪ್ಪುದಲಿಂದ
ಭಕ್ತರ ಮನೆಯಲ್ಲಿ ತೊತ್ತಾಗಿಪ್ಪುದು
ಕರಲೇಸಯ್ಯಾ !
" ತಾರೋ ಅಗ್ಘವಣಿಯ, ನೀಡೋ ಪತ್ರೆಯ,
ಅಂಗಕ್ಕೆ ಬೋನವ ಹಿಡಿಯೋ" ಎಂಬರು ;
"ಕೂಡಲ ಸಂಗನ ಮಹಾಮನೆಯಲ್ಲಿ
ಒಕ್ಕುದನುಣ್ಣೋ ತೊತ್ತೇ" ಎಂಬರು.

***

ಹೊಯಿದವರೆನ್ನ ಹೊರೆದವರೆಂಬೆನು ;
ಬಯಿದವರೆನ್ನ ಬಂಧುಗಳೆಂಬೆನು.
ನಿಂದಿಸಿದವರೆನ್ನ ತಾಯಿತಂದೆಗಳೆಂಬೆ ;
ಅಳಿಗೊಂಡವರೆನ್ನ ಆಳ್ದರೆಂಬೆ.
ಜರಿದವರೆನ್ನ ಜನ್ಮಬಂಧುಗಳೆಂಬೆ ;
ಕೊಂಡಾಡಿದವರೆನ್ನ ಹೊನ್ನ ಶೂಲದಲ್ಲಿಕ್ಕಿದರು
ಕೂಡಲಸಂಗಮದೇವಾ.

***

ಅಡವಿಯೊಳಗೆ ಹೊಲುಬುಗೆಟ್ಟ ಪಶುವಿನಂತೆ,
'ಅಂಬೇ ಅಂಬೇ' ಎಂದು ಕರೆಯುತ್ತಿದ್ದೇನೆ.
'ಅಂಬೇ ಅಂಬೇ' ಎಂದು ಒರಲುತ್ತಲಿದ್ದೇನೆ.
ಕೂಡಲಸಂಗಮದೇವ ಬಾಳು ಬಾಳೆಂಬನ್ನಕ್ಕ

***

'ಅಯ್ಯಾ, ಅಯ್ಯಾ', ಎಂದು ಕರೆಯುತ್ತಲಿದ್ದೇನೆ.
'ಅಯ್ಯಾ, ಅಯ್ಯಾ', ಎಂದೊರಲುತ್ತಿದ್ದೇನೆ: ಓ ಎನ್ನಲಾಗದೆ, ಅಯ್ಯಾ ?
ಆಗಲೂ ನಿಮ್ಮನ್ನು ಕರೆಯುತ್ತಲಿದ್ದೇನೆ,
ಮೌನವೇ ಕೂಡಲಸಂಗಮದೇವಾ.



ಎನ್ನ ಕಾಯವ ದಂಡಿಗೆಯ ಮಾಡಯ್ಯಾ ;
ಎನ್ನ ಸಿರವ ಸೋರೆಯ ಮಾಡಯ್ಯಾ ;
ಎನ್ನ ನರವ ತಂತಿಯ ಮಾಡಯ್ಯಾ ;
ಎನ್ನ ಬೆರಳ ಕಡ್ಡಿಯ ಮಾಡಯ್ಯ ;
ಬತ್ತೀಸ ರಾಗವ ಹಾಡಯ್ಯ ;
ಉರದಲೊತ್ತಿ ಬಾರಿಸು ಕೂಡಲಸಂಗಮದೇವಾ.

***

ಉಳ್ಳವರು ಶಿವಾಲಯವ ಮಾಡಿದರು ;
ನಾನೇನ ಮಾಡಲಯ್ಯಾ, ಬಡವನು !
ಎನ್ನ ಕಾಲೇ ಕಂಭ, ದೇಹವೇ ದೇಗುಲ,
ಶಿರವೇ ಹೊನ್ನ ಕಲಶವಯ್ಯಾ,
ಕೂಡಲ ಸಂಗಮದೇವ ಕೇಳಯ್ಯಾ,
ಸ್ಥಾವರಕ್ಕಳಿವುಂಟು, ಜಂಗಮಕ್ಕಳಿವಿಲ್ಲ.

***

ಭಕ್ತಿಯಿಲ್ಲದ ಬಡವ ನಾನಯ್ಯಾ,
ಕಕ್ಕಯ್ಯನ ಮನೆಯಲು ಬೇಡಿದೆ,
ಚೆನ್ನಯ್ಯನ ಮನೆಯಲು ಬೇಡಿದೆ !
ದಾಯಸ್ಯನ ಮನೆಯಲೂ ಬೇಡಿದೆ,
ಎಲ್ಲ ಪುರಾತನರು ನೆರೆದು ಭಕ್ತಿ ಭಿಕ್ಷವನಿಕ್ಕಿದರೆ,
ಎನ್ನ ಪಾತ್ರೆ ತುಂಬಿತ್ತು ಕೂಡಲಸಂಗಮದೇವಾ !

***

ಇವನಾರವ, ಇವನಾರವ, ಇವನಾರವ? ನೆಂದೆನಿಸದಿರಯ್ಯಾ,
ಇವ ನಮ್ಮವ, ಇವ ನಮ್ಮವ, ಇವ ನಮ್ಮವನೆಂದಿನಿಸಯ್ಯಾ
ಕೂಡಲಸಂಗಮದೇವಾ.
ನಿಮ್ಮ ಮನೆಯ ಮಗನೆನಿಸಯ್ಯಾ

ಒಲವಿಲ್ಲದ ಪೂಜೆ ನೇಹವಿಲ್ಲದ ಮಾಟ !
ಆ ಪೂಜೆಯು, ಆ ಮಾಟವು
ಚಿತ್ರದ ರೂಹು ಕಾಣಿರಣ್ಣಾ !
ಚಿತ್ರದ ಕಬ್ಬು ಕಾಣಿರಣ್ಣಾ !
ಅಪ್ಪಿದರೆ ಸುಖವಿಲ್ಲ, ಮೆಲಿದರೆ ರುಚಿಯಿಲ್ಲ !
ಕೂಡಲಸಂಗಮದೇವಾ, ನಿಜವಿಲ್ಲದವನ ಭಕ್ತಿ !

***

ಹಸಿದು ಎಕ್ಕೆಯ ಕಾಯ ಮೆಲಬಹುದೇ ?
ನೀರಡಿಸಿ ವಿಷವನೀಂಟಬಹುದೇ ?
ಸುಣ್ಣದ ತುಯ್ಯಲ ಬಣ್ಣ ಒಂದೆ ಎಂದರೆ
ನಂಮತನಕ್ಕೆ ಉಣ್ಣಬಹುದೇ ?
ಲಿಂಗಸಾರಾಯ ಸಜ್ಜನರಲ್ಲದವರ
ಕೂಡಲಸಂಗಮದೇವರೆಂತೊಲಿವನು ?

***

ಅರಿಸಿನವನೆ ಮಿಂದು, ಹೊಂದೊಡಿಗೆಯನೆ ತೊಟ್ಟು,
ಪುರುಷನ ಒಲವಿಲ್ಲದ ಲಲನೆಯಂತಾಗಿರ್ದೆನಯ್ಯಾ !
ವಿಭೂತಿಯನೆ ಹೂಸಿ, ರುದ್ರಾಕ್ಷಿಯನೆ ಕಟ್ಟಿ,
ಶಿವ, ನಿಮ್ಮೊಲವಿಲ್ಲದಂತೆ ಆಗಿರ್ದೆನಯ್ಯಾ !
ಕೆಟ್ಟು ಬಾಳುವರಿಲ್ಲಾ ಎಮ್ಮವರ ಕುಲದಲ್ಲಿ :
ನೀನೊಲಿದಂತೆ ಸಲಹಯ್ಯಾ ಕೂಡಲಸಂಗಮದೇವಾ

***

ಅಕಟಕಟಾ ! ಶಿವ, ನಿನಗಿನಿತು ಕರುಣವಿಲ್ಲಾ !
ಅಕಟಕಟಾ ! ಶಿವ, ನಿನಗಿನಿತು ಕೃಪೆಯಿಲ್ಲಾ
ಏಕೆ ಹುಟ್ಟಿಸಿದಿ ಇಹಲೋಕ ದುಃಖಿಯ ಪರಲೋಕ ದೂರನ !
ಏಕೆ ಹುಟ್ಟಿಸಿದೆ ? ಕೂಡಲಸಂಗಮದೇವಾ,
ಕೇಳಯ್ಯಾ ಎನಗಾಗಿ ಮತ್ತೊಂದು ತರುಮರನಿಲ್ಲವೇ ?



ಹೊತ್ತಾರೆಯೆದ್ದು ಅಗ್ಘವಣಿ ಪತ್ರೆಯ ತಂದು
ಹೊತ್ತು ಹೋಗದ ಮುನ್ನ ಪೂಜಿಸು ಲಿಂಗವ
ಹೊತ್ತು ಹೋದ ಬಳಿಕ ನಿನ್ನನಾರು ಬಲ್ಲರು ?
ಹೊತ್ತು ಹೋಗದ ಮುನ್ನ
ಮೃತ್ಯುವೊಯ್ಯದ ಮುನ್ನ
ತೊತ್ತುಗೆಲಸವ ಮಾಡು - ಕೂಡಲ ಸಂಗಮದೇವನ ॥

***

ಹಸಿವಾದೊಡುಂಬುದನು, ಸತಿಯ ಸಂಭೋಗವನು
ಆನಾಗಿ ನೀ ಮಾಡೆಂಬವರುಂಟೆ ?
ಮಾಡುವುದು ಮಾಡುವುದು ಮನಮುಟ್ಟಿ,
ಮಾಡುವುದು, ಮಾಡುವುದು ತನುಮುಟ್ಟಿ,
ತನುಮುಟ್ಟಿ, ಮನಮುಟ್ಟದಿರ್ದಡೆ
ಕೂಡಲಸಂಗಮದೇವನೇತರಲ್ಲಿಯೂ ಮೆಚ್ಚ !

***

ಹಮ್ಮಿನ ಭಕ್ತಿ ಕರ್ಮಕ್ಕೆ ಮೊದಲು,
ಮರ್ಮವನರಿಯದ ಮಾಟ ಸಯಿದಾನದ ಕೇಡು !
ಬಂದ ಸಮಯೋಚಿತವನರಿಯದಿದ್ದರೆ
ನಿಂದರಲೊಲ್ಲ ಕೂಡಲಸಂಗಮದೇವ.

***

ನೀನೊಲಿದರೆ ಕೊರಡು ಕೊನರುವುದಯ್ಯಾ;
ನೀನೊಲಿದರೆ ಬರಡು ಹಯನಹುದಯ್ಯಾ;
ನೀನೊಲಿದರೆ ವಿಷವೆ ಅಮೃತವಹುದಯ್ಯಾ,
ನೀನೊಲಿದರೆ ಸಕಲಪಡಿಪದಾರ್ಥ ಇದರಲ್ಲಿರ್ಪುವು
ಕೂಡಲಸಂಗವದೇವಾ.

ಕೂಸುಳ್ಳ ಸೂಳೆ
ಧನದಾಸೆಗೆ ಒತ್ತೆಯ ಕೊಂಡಡೆ
ಕೂಸಿಂಗಲ್ಲ ಬೊಜಗಂಗಲ್ಲ !
ಕೂಸನೊಮ್ಮೆ ಸಂತೈಸುವಳು
ಬೊಜಗನನ್ನೊಮ್ಮೆ ನೆರೆವಳು
ಧನದಾಸೆ ಬಿಡದು ಕೂಡಲ ಸಂಗಮದೇವಾ ॥

***

ಮನವೇ ಸರ್ಪ, ತನುವೇ ಹೇಳಿಗೆ
ಹಾವಿನೊಡತಣ ಹುದುವಾಳಿಗೆ !
ಇನ್ನಾವಾಗ ಕೊಂದಹುದೆಂದರಿಯೆ
ಇನ್ನಾವಾಗ ತಿಂದಹುದೆಂದರಿಯೆ
ನಿಚ್ಚಕ್ಕೆ ನಿಮ್ಮ ಪೂಜಿಸಬಲ್ಲಡೆ
ಅದೇ ಗಾರುಡ - ಕೂಡಲ ಸಂಗಮದೇವಾ ॥

***

ಮಾಡಿ ಮಾಡಿ ಕೆಟ್ಟರು ಮನವಿಲ್ಲದೆ :
ನೀಡಿ ನೀಡಿ ಕೆಟ್ಟರು ನಿಜವಿಲ್ಲದೆ :
ಮಾಡುವ ನೀಡುವ ನಿಜಗುಣವುಳ್ಳಡೆ
ಕೂಡಿಕೊಂಬ ನಮ್ಮ ಕೂಡಲಸಂಗಮಧೇವ.

***

ಮಡಕೆಯ ಮಾಡುವರೆ ಮಣ್ಣೇ ಮೊದಲು.
ತೊಡಗೆಯ ಮಾಡುವರೆ ಹೊನ್ನೇ ಮೊದಲು.
ಶಿವಪಥನರಿವರೆ ಗುರುಪಥವೇ ಮೊದಲು
ಕೂಡಲಸಂಗಮದೇವನರಿವರೆ ಶರಣರ ಸಂಗವೇ ಮೊದಲು.



ಮಾಡಿ ನೀಡಿ ಲಿಂಗವ ಪೂಜಿಸಿಹೆವೆಂಬವರು ನೀವೆಲ್ಲ ಕೇಳಿರಣ್ಣಾ
ಹಾಗದ ಕೆರಹ ಹೊರಗೆ ಕಳೆದು
ದೇಗುಲಕ್ಕೆ ಹೋಗಿ ನಮಸ್ಕಾರ ಮಾಡುವನಂತೆ :
ತನ್ನ ಕೆರಹಿನ ಧ್ಯಾನವಲ್ಲದೆ, ದೇವರ ಧ್ಯಾನವಿಲ್ಲ !
ಧನವನಿರಿಸದಿರಾ : ಇರಿಸಿದರೆ ಭವ ಬಪ್ಪುದು ತಪ್ಪದು.
ಕೂಡಲಸಂಗನ ಶರಣರಿಗೆ ಸವಿಸಲೇಬೇಕು.

***

ತನುಮುಟ್ಟಿ ಮನಮುಟ್ಟದೆ
ದೂರವಾದರಯ್ಯಾ ಬೆಲೆವೆಣ್ಣಿನಂತೆ !
ಸೂಳೆ ತನುಮುಟ್ಟಿ ಅಪ್ಪುವಳಲ್ಲದೆ
ಮನಮುಟ್ಟಿ ಅಪ್ಪಳಾಗಿ
ಆಚಾರವರಿಯದ ಅರೆಮರುಳುಗಳು
ಸುಖವನೆತ್ತಬಲ್ಲರು ಕೂಡಲಸಂಗಮದೇವಾ ?

***

ಜನಿತಕ್ಕೆ ತಾಯಾಗಿ ಹೆತ್ತಳು ಮಾಯೆ
ಮೋಹಕ್ಕೆ ಮಗುವಾಗಿ ಹುಟ್ಟಿದಳು ಮಾಯೆ
ಕೂಟಕ್ಕೆ ಸ್ತ್ರೀಯಾಗಿ ಕೂಡಿದಳು ಮಾಯೆ
ಇದಾವಾವ ಪರಿಯಲ್ಲಿ ಕಾಡಿತ್ತು ಮಾಯೆ
ಈ ಮಾಯೆಯ ಕಳೆವಡೆ ಎನ್ನಳವಲ್ಲ
ನೀವೇ ಬಲ್ಲಿರಿ - ಕೂಡಲ ಸಂಗಮದೇವಾ ॥

***

ನೋಡಿ ನೋಡಿ ಮಾಡುವ ನೇಮ ಸಲ್ಲವು! ಸಲ್ಲವು!!
ತನುವುದ್ದೇಶ, ಮನವುದ್ದೇಶವಾಗಿ ಮಾಡುವ ನೇಮ ಸಲ್ಲವು! ಸಲ್ಲವು!!
ಗುರುಪಥವ ಮೀರಿ ಮಾಡುವ ನೇಮ ಸಲ್ಲವು! ಸಲ್ಲವು!!
ಕೂಡಲ ಸಂಗಮದೇವಯ್ಯಾ, ಇವು ನಿಮ್ಮ ನಿಜದೊಳಗೆ ನಿಲ್ಲವು! ನಿಲ್ಲವು!!

ಎಡದ ಪಾದದಲೊದ್ದಡೆ ಬಲದ ಪಾದವ ಹಿಡಿವೆ
ಬಲದ ಪಾದದಲೊದ್ದಡೆ ಎಡದ ಪಾದವ ಹಿಡಿವೆ
ತ್ರಾಹಿತ್ರಾಹಿ ತಪ್ಪೆನ್ನದು, ಕ್ಷಮೆ ನಿಮ್ಮದು,
ಕೂಡಲ ಸಂಗಮದೇವ
ನಿಮ್ಮ ಕರುಣದ ಕಂದ ನಾನು ॥

***

ಎಮ್ಮವರು ಬೆಸಗೊಂಡಡೆ ಶುಭಲಗ್ನವೆನ್ನಿರಯ್ಯಾ,
ರಾಶಿಕೂಟ ಋಣಸಂಬಂಧವುಂಟೆಂದು ಹೇಳಿರಯ್ಯಾ,
ಚಂದ್ರಬಲ ತಾರಾಬಲ ಉಂಟೆಂದು ಹೇಳಿರಯ್ಯಾ,
ನಾಳಿನ ದಿನಕಿಂದಿನ ದಿನ ಲೇಸೆಂದು ಹೇಳಿರಯ್ಯಾ,
ಕೂಡಲಸಂಗಮದೇವನ ಪೂಜಿಸಿದ ಫಲ ನಿಮ್ಮದಯ್ಯಾ.

***

ಬರಬರ ಭಕ್ತಿಯರೆಯಾಯಿತ್ತು ಕಾಣಿರಣ್ಣ ;
ಮೊದಲದಿನ ಹಣೆ ಮುಟ್ಟಿ, ಮರುದಿನ ಕೈಯ ಮುಟ್ಟಿ
ಮೂರೆಂಬ ದಿನಕ್ಕೆ ತೂಕಡಿಕೆ ಕಾಣಿರಣ್ಣಾ
ಹಿಡಿದುದ ಬಿಡದಿದ್ದರೆ ಕಡೆಗೆ ಬಾಚುವ :
ಅಲ್ಲದಿದ್ದರೆ ನಡುನೀರಲ್ಲದ್ದುವ ನಮ್ಮ ಕೂಡಲ ಸಂಗಮದೇವ.

***

ಅಕಟಕಟಾ! ಬೆಡಗು ಬಿನ್ನಾಣವೆಂಬುದೇನೋ ?
"ಓಂ ನಮಃ ಶಿವಾಯ" ಎಂಬುದೇ ಮಂತ್ರ,
"ಓಂ ನಮಃ ಶಿವಾಯ" ಎಂಬುದೇ ತಂತ್ರ,
ನಮ್ಮ ಕೂಡಲ ಸಂಗಮದೇವರ ನೆನೆವುದೇ ಮಂತ್ರ.



ಶಿವಭಕ್ತನಾಗಿ ತನ್ನ ಹಿಡಿದಹೆನೆಂದು ಹೋದಡೆ
ನುಗ್ಗು ಮಾಡುವ, ನುಸಿಯ ಮಾಡುವ ;
ಮಣ್ಣು ಮಾಡುವ, ಮಸಿಯ ಮಾಡುವ,
ಕೂಡಲಸಂಗಮದೇವರ ನೆರೆನಂದಿದನಾದಡೆ
ಕಡೆಗೆ ತನ್ನಂತೆ ಮಾಡುವ.

***

ದೇವಲೋಕ ಮರ್ತ್ಯಲೋಕವೆಂಬುದು ಬೇರಿಲ್ಲ ಕಾಣಿರಣ್ಣ !
ಸತ್ಯವ ನುಡಿವುದೇ ದೇವಲೋಕ !
ಮಿಥ್ಯವ ನುಡಿವುದೆ ಮರ್ತ್ಯಲೋಕ !
ಆಚಾರವೇ ಸ್ವರ್ಗ, ಅನಾಚಾರವೇ ನರಕ !
ನೀವೇ ಪ್ರಮಾಣು ಕೂಡಲ ಸಂಗಮದೇವ ॥

***

ನಂಬರು, ನೆಚ್ಚರು, ಬರಿದೆ ಕರೆವರು ;
ನಂಬಲರಿಯರೀ ಲೋಕದ ಮನುಜರು !
ನಂಬಿ ಕರೆದೊಡೆ ಓ ಎನ್ನನೆ ಶಿವನು ?
ನಂಬದೆ, ನಚ್ಚದೆ, ಬರಿದೆ ಕರೆವರ
ಕೊಂಬ ಮೆಟ್ಟಿ ಕೂಗೆಂದ ನಮ್ಮ ಕೂಡಲಸಂಗಮದೇವ.

***

ಭವಬಂಧನ ದುರಿತಂಗಳ ಗೆಲುವೊಡೆ,
'ಓಂ ನಮಃ ಶಿವಾಯ ಶರಣೆಂದೊಡೆ ಸಾಲದೇ ?
'ಹರ ಹರ ಶಂಕರ,
ಶಿವ ಶಂಕರ ಜಯ ಜಯ ಶಂಕರ ಶರಣೆ'ನ್ನುತ್ತಿರ್ದೇನೆ,
'ಎನ್ನ ಪಾತಕ ಪರಿಹಾರ'
'ಕೂಡಲ ಸಂಗಮ ದೇವ ಶರಣೆ'ನ್ನುತ್ತಿರ್ದೇನೆ.

ಕೋಣನ ಹೇಲಿಂಗೆ ಕುನ್ನಿ ಬಸಗುತ್ತ ಬಡೆವಂತೆ
ತಾವು ನಂಬರು, ನಂಬುವವರ ನಂಬಲೀಯರು.
ತಾವು ಮಾಡರು, ಮಾಡುವವರ ಮಾಡಲೀಯರು !
ಮಾಡುವ ಭಕ್ತರ ಕಂಡು ಸೈರಿಸಲಾರವರ,
ಕೂಗಿಡೆ ಕೂಗಿಡೆ, ನರಕದಲ್ಲಿಕ್ಕುವ ಕೂಡಲಸಂಗಮದೇವ !

***

ಅರ್ಥರೇಖೆಯುದ್ದಲ್ಲಿ ಫಲವೇನು ?
ಆಯುಷ್ಯರೇಖೆಯುಲ್ಲದನ್ನಕ್ಕ !
ಹಂದೆಯ ಕೈಯಲ್ಲಿ ಚಂದ್ರಾಯುಧವಿದ್ದು ಫಲವೇನು ?
ಅಂಧಕನ ಕೈಯಲ್ಲಿ ದರ್ಪಣವಿದ್ದು ಫಲವೇನು ?
ಮರ್ಕಟನ ಕೈಯಲ್ಲಿ ಮಾಣಿಕವಿದ್ದು ಫಲವೇನು ?
ನಮ್ಮ ಕೂಡಲ ಸಂಗನ ಶರಣರನರಿಯದವರ ಕೈಯಲ್ಲಿ
ಲಿಂಗವಿದ್ದು ಫಲವೇನು - ಶಿವಪಥವನರಿಯದನ್ನಕ್ಕ ?

***

ಮೇಲಾಗಲೊಲ್ಲೆನು ಕೀಳಾಗಲಲ್ಲದೆ :
ಕೀಳಿಂಗಲ್ಲದೆ ಹಯನು ಕರೆವುದೆ ?
ಮೇಲಾಗಿ ನರಕದೊಳೋಲಾಡಲಾರೆನು :
ನಿಮ್ಮ ಶರಣರ ಪಾದಕ್ಕೆ ಕೀಳಾಗಿರಿಸು,
ಮಹಾದಾನಿ, ಕೂಡಲಸಂಗಮದೇವಾ.

***

ಜಾಳಿಯ ಕಲಿಕೆ, ಕಣಿಗಿಲೆಲೆಯು;
ತೊರೆಯ ತಡಿಯ ಮಳಲ ತಂದು
ಗೌರಿಯ ನೋಡುವ ಬನ್ನಿರೇ,
ಚಿಕ್ಕ ಮಕ್ಕಳೆಲ್ಲರೂ ನೆರೆದು
ಅನುಪಮದಾನಿ ಕೂಡಲಸಂಗಮದೇವ ಗಂಡನಾಗಬೇಕೆಂದು.



ಮಾವಿನ ಕಾಯೊಳಗೊಂದು ಎಕ್ಕೆಯ ಕಾಯಿ ನಾನಯ್ಯಾ.
ಆನು ಭಕ್ತನೆಂತೆಂಬೆ, ನಿಮ್ಮ ಶರಣರ ಮುಂದೆ ನಾಚಿಕೆಯಿಲ್ಲದೆ?
ಕೂಡಲಸಂಗನ ಶರಣರ ಮುಂದೆ ನಾನೆಂತು ಭಕ್ತನಪ್ಪೆನಯ್ಯಾ ?

***

ಅಡ್ಡ ದೊಡ್ಡ ನಾನಲ್ಲಯ್ಯಾ : ದೊಡ್ಡ ಬಸಿರು ಎನಗಿಲ್ಲಯ್ಯಾ :
ದೊಡ್ಡವರಲ್ಲದೆ ಎಮ್ಮ ಶರಣರು ಮನ್ನಿಸರಯ್ಯಾ !
ಹಡೆದುಂಬ ಸೂಳೆಯಂತೆ ಧನವುಳ್ಳವರನರಸಿಯರಸಿ
ಬೋಧಿಸಲು, ಪ್ರಾರ್ಥಿಸಲು ಮುನ್ನ ನಾನರಿಯೆನಯ್ಯಾ.
ದೊಡ್ಡತನವೆನಗಿಲ್ಲ : ಅಂಜುವೆನೆಂಜುವೆ ನಿಮ್ಮ ಪ್ರಮಥರಿಗೆ;
ಅನಾಥ ನಾನಯ್ಯ, ಕೂಡಲಸಂಗಮದೇವಾ.

***

ಮಾಡಿದೆನೆಂಬುದು ಮನದಲ್ಲಿ ಹೊಳೆದಡೆ
ಏಡಿಸಿ ಕಾಡಿತ್ತು ಶಿವನ ಡಂಗುರ !
ಮಾಡಿದೆನೆನ್ನದಿರಾ ಲಿಂಗಕ್ಕೆ, ಮಾಡಿದೆನೆನ್ನದಿರಾ ಜಂಗಮಕ್ಕೆ
ಮಾಡಿದೆನೆಂಬುದು ಮನದಲ್ಲಿಲ್ಲದಿದ್ದರೆ,
ಬೇಡಿತ್ತನೀವ ಕೂಡಲಸಂಗಮದೇವ.

***

ಎಮ್ಮವರು ಬೆಸಗೊಂಡರೆ ಶುಭಲಗ್ನವೆನ್ನಿರಯ್ಯಾ,
ರಾಶಿಕೂಟ ಋಣ ಸಂಬಂಧವುಂಟೆಂದು ಹೇಳಿರಯ್ಯಾ,
ಚಂದ್ರಬಲ ತಾರಾಬಲವುಂಟೆಂದು ಹೇಳಿರಯ್ಯಾ,
ನಾಳಿನ ದಿನಕಿಂದಿನ ದಿನ ಲೇಸೆಂದು ಹೇಳಿರಯ್ಯಾ.
ಕೂಡಲ ಸಂಗಮದೇವನ ಪೂಜಿಸಿದ ಫಲ ನಿಮ್ಮದಯ್ಯಾ.

ಬತ್ತಿ ಹೊಸೆದು ಕಿಚ್ಚನೆ ಮಾಡಿದೆನೆಂದು
ಮುಚ್ಚಿ ಹಿಡಿದೊಡೆ ಕೈ ಬೇಯದಿಹುದೆ ?
'ಎನ್ನಿಂದಾಯಿತ್ತು, ಎನ್ನಿಂದ ಹೋಯಿತ್ತು ' ಎನ್ನದಿರು ಮನವೆ :
ನಾನು ಮಾಡಿದೆನೆನ್ನದಿರು ಮನವೆ,
ಕೂಡಲಸಂಗಮದೇವ ಕೇಳಯ್ಯ :
ಚೆನ್ನಬಸವಣ್ಣನ ಪಾದಕೆ 'ನಮೋ ನಮಃ' ಎಂಬೆನು.

***

ಅಂದಣವನೇರಿದ ಸೊಣಗನಂತೆ -
ಕಂಡೊಡೆ ಬಿಡದು ಮುನ್ನಿನ ಸ್ವಭಾವವನು,
ಸುಡು ! ಸುಡು !! ಮನವಿದು ವಿಷಯಕ್ಕೆ ಹರಿವುದು :
ಮೃಡ, ನಿಮ್ಮನನುದಿನ ನೆನೆಯಲೀಯದು.
ಎನ್ನೊಡೆಯ ಕೂಡಲಸಂಗಮದೇವಾ,
ನಿಮ್ಮ ಚರಣವ ನೆನೆವಂತೆ ಕರುಣಿಸು,
ಸೆರಗೊಡ್ಡಿ ಬೇಡುವೆ, ನಿಮ್ಮ ಧರ್ಮ!

***

ಎನ್ನಿಂದ ಕಿರಿಯರಿಲ್ಲ, ಶಿವಭಕ್ತರಿಂದ ಹಿರಿಯರಿಲ್ಲಾ.
ನಿಮ್ಮ ಪಾದಸಾಕ್ಷಿ, ಎನ್ನ ಮನಸಾಕ್ಷಿ,
ಕೂಡಲಸಂಗಮದೇವಾ, ಎನಗಿದೇ ದಿಬ್ಯ !

***

ಸಗಣಿಯ ಬೆನಕಂಗೆ ಸಂಪಿಗೆಯರಳಲ್ಲಿ ಪೂಜಿಸಿದರೆ,
ರಂಜನೆಯಲ್ಲದೆ ಅದರ ಗುಂಜಳ ಬಿಡದಣ್ಣಾ !
ಮಣ್ಣ ಪುತ್ತಳಿಯ ಮಾಣದೆ ಜಲದಲ್ಲಿ ತೊಳೆದರೆ
ನಿಚ್ಚ ನಿಚ್ಚಕ್ಕೆ ಕೆಸರಹುದಲ್ಲದೆ ಅದರಚ್ಚುಗ ಬಿಡದಣ್ಣಾ !
ಲೋಕದ ಮಾನವಂಗೆ ಶಿವದೀಕ್ಷೆಯ ಕೊಟ್ಟರೆ
ಕೆಟ್ಟವನೇಕೆ ಶಿವಭಕ್ತನಹನು ಕೂಡಲಸಂಗಮದೇವಾ ?



ಚಂದ್ರೋದಯಕ್ಕೆ ಅಂಬುಧಿ ಹೆಚ್ಚುವುದಯ್ಯ
ಚಂದ್ರ ಕುಂದೆ ಕುಂದುವುದಯ್ಯ
ಚಂದ್ರಂಗೆ ರಾಹುವಡ್ಡಬಂದಲ್ಲಿ ಅಂಬುಧಿ ಬೊಬ್ಬಿಟ್ಟಿತ್ತೆ ?
ಅಂಬುಧಿಯ ಮುನಿಯಾಪ್ರೋಶನವ ಕೊಂಬಲ್ಲಿ
ಚಂದ್ರಮನಡ್ಡ ಬಂದನೆ ?
ಆರಿಗಾರೂ ಇಲ್ಲ, ಕೆಟ್ಟವಂಗೆ ಕಳೆಯಿಲ್ಲ !
ಜಗದ ನಂಟ ನೀನೇ ಅಯ್ಯ ಕೂಡಲಸಂಗಮದೇವ ॥

***

ಬಾಯಿ ಘನವೆಂದು ಆಡುವನ ತೋರದಿರಯ್ಯಾ
ಅವನ ಸಂಗದಲ್ಲಿರಿಸದಿರಯ್ಯಾ
ಅವನ ಸಹಪಂಕ್ತಿಯಲ್ಲಿ ಕುಳ್ಳಿರಿಸದಿರಯ್ಯಾ
ಕೂಡಲಸಂಗಮದೇವಯ್ಯಾ ॥

***

ಹರಿವ ಹಾವಿಂಗಂಜೆ, ಉರಿಯ ನಾಲಗೆಗಂಜೆ,
ಸುರಗಿಯ ಮೊನೆಗಂಜೆ !
ಒಂದಕ್ಕಂಜುವೆ, ಒಂದಕ್ಕಳುಕುವೆ :
ಪರಸ್ತ್ರೀ ಪರಧನವೆಂಬೀ ಜೂಬಿಂಗಂಜುವೆ !
ಮುನ್ನಂಜದ ರಾವಣನೇವಿಧಿಯಾದ ! -
ಅಂಜುವೆನಯ್ಯಾ ಕೂಡಲಸಂಗಮದೇವಾ.

***

ಮನೆಯೊಳಗೆ ಮನೆಯೊಡೆನಿದ್ದಾನೋ ಇಲ್ಲವೋ ?
ಹೊಸ್ತಿಲಲ್ಲಿ ಹುಲ್ಲು ಹುಟ್ಟಿ ಮನೆಯೊಳಗೆ ರಜ ತುಂಬಿ:
ಮನೆಯೊಳಗೆ ಮನೆಯೊಡೆಯನಿದ್ದಾನೋ ಇಲ್ಲವೋ ?
ತನವಿನೊಳಗೆ ಹುಸಿ ತುಂಬಿ, ಮನದೊಳಗೆ ವಿಷಯ ತುಂಬಿ,
ಮನೆಯೊಳಗೆ ಮನೆಯೊಡೆಯ ನಿಲ್ಲ ಕೂಡಲ ಸಂಗಮದೇವ.

ಕೊಲ್ಲೆನಯ್ಯಾ ಪ್ರಾಣಿಗಳ,
ಮೆಲ್ಲೆನಯ್ಯಾ ಬಾಯಿಚ್ಚೆಗೆ,
ಒಲ್ಲೆನಯ್ಯಾ ಪರಸತಿಯರ ಸಂಗವ,
ಬಲ್ಲೆನಯ್ಯಾ ಮುಂದೆ ತೊಡಕುಂಟೆಂಬುದ !
ಬಳ್ಳದ ಬಾಯಂತೆ ಒಂದೆ ಮನವ ಮಾಡಿ
ನಿಲ್ಲೆಂದು ನಿಲ್ಲಿಸಯ್ಯಾ ಕೂಡಲಸಂಗಮದೇವಾ.

***

ಎನ್ನ ನಡೆಯೊಂದು ಪರಿ !
ಎನ್ನ ನುಡಿಯೊಂದು ಪರಿ !
ಎನ್ನೊಳಗೇನೂ ಶುದ್ಧವಿಲ್ಲ ನೋಡಯ್ಯ !
ನುಡಿಗೆ ತಕ್ಕ ನಡೆಯ ಕಂಡರೆ
ಕೂಡಲ ಸಂಗಮದೇವ ತನ್ನೊಳಗಿಪ್ಪನಯ್ಯ ॥

***

ಆಯುಷ್ಯ ತೀರಿದಲ್ಲದೆ ಮರಣವಿಲ್ಲ,
ಭಾಷೆ ತಪ್ಪಿದಲ್ಲದೆ ದಾರಿದ್ರ್ಯವಿಲ್ಲ,
ಅಂಜಲದೇಕೋ ಲೋಕ ವಿಗುರ್ಬಣೆಗೆ ?
ಅಂಜಲದೇಕೋ ಕೂಡಲಸಂಗಮದೇವಾ, ನಿಮ್ಮಾಳಾಗಿ ?

***

ಎನಿಸು ಕಾಲ ಕಲ್ಲು ನೀರೊಳಗಿರ್ದರೇನು:
ನೆನೆದು ಮೃದುವಾಗಬಲ್ಲುದೇ ?
ಎನಿಸು ಕಾಲ ನಿಮ್ಮ ಪೂಜಿಸಿ ಏವೆನಯ್ಯಾ,
ಮನದಲ್ಲಿ ದೃಢವಿಲ್ಲದನ್ನಕ್ಕ ?
ನಿಧಾನವ ಕಾಯ್ದಿರ್ದ ಬೆಂತರನಂತೆ
ಅವರ ಬಧಿಯೆನಗಾಯಿತ್ತು ಕೂಡಲಸಂಗಮದೇವಾ.



ಕಾಯದ ಕಳವಳಕ್ಕಂಜಿ 'ಕಾಯಯ್ಯಾ' ಎನ್ನೆನು,
ಜೀವನೋಪಾಯಕ್ಕಂಜಿ 'ಈಯಯ್ಯಾ' ಎನ್ನೆನು.
'ಯದ್ಭಾವಂ ತದ್ಭವತಿ'
ಉರಿ ಬರಲಿ, ಸಿರಿ ಬರಲಿ, 'ಬೇಕು ಬೇಡೆ'ನ್ನೆನಯ್ಯಾ
ಆ ನಿಮ್ಮ ಹಾರೆನು, ಮಾನವರ ಬೇಡೆನು,
ಆಣೆ, ನಿಮ್ಮಾಣೆ, ಕೂಡಲಸಂಗಮದೇವಾ

***

ಅತ್ತಲಿತ್ತಲು ಹೋಗದಂತೆ ಹೆಳವನ ಮಾಡಯ್ಯ ತಂದೆ :
ಸುತ್ತಿ ಸುಳಿದು ನೋಡದಂತೆ ಅಂಧಕನ ಮಾಡಯ್ಯಾ ತಂದೆ:
ಮತ್ತೊಂದ ಕೇಳದಂತೆ ಕಿವುಡನ ಮಾಡಯ್ಯಾ ತಂದೆ :
ನಿಮ್ಮ ಶರಣರ ಪಾದವಲ್ಲದೆ ಅನ್ಯವಿಷಯಕ್ಕೆಳಸದಂತೆ ಇರಿಸು
ಕೂಡಲಸಂಗಮದೇವಾ.

***

ದಯವಿಲ್ಲದ ಧರ್ಮವದೇವುದಯ್ಯಾ ?
ದಯವೇ ಬೇಕು, ಸಕಲ ಪ್ರಾಣಿಗಳೆಲ್ಲರಲ್ಲಿಯೂ,
ದಯವೇ ಧರ್ಮದ ಮೂಲವಯ್ಯ,
ಕೂಡಲಸಂಗಯ್ಯನಂತಲ್ಲದೊಲ್ಲನಯ್ಯಾ.

***

ಎರದೆಲೆಯಂತೆ ಒಳಗೊಂದು ಹೊರಗೊಂದಾದರೆ ಮೆಚ್ಚುವನೇ?
ಬಾರದ ಭವಂಗಳ ಬರಿಸುವನಲ್ಲದೆ ಮೆಚ್ಚುವನೇ ?
ಅಘೋರ ನರಕವನುಣಿಸುವನಲ್ಲದೆ ಮೆಚ್ಚುವನೇ ?
ಉಡುವಿನ ನಾಲಿಗೆಯಂತೆ ಎರಡಾದರೆ
ಕೂಡಲಸಂಗಯ್ಯಾ ಮೆಚ್ಚುವನೇ

ಕಂಡ ಭಕ್ತರಿಗೆ ಕೈಮುಗಿವಾತನೇ ಭಕ್ತ,
ಮೃದುವಚನವೇ ಸಕಲ ಜಪಂಗಳಯ್ಯಾ,
ಮೃದುವಚನವೇ ಸಕಲ ತಪಂಗಳಯ್ಯಾ,
ಸದುವಿನಯವೇ ಸದಾಶಿವನೊಲುಮೆಯಯ್ಯಾ ;
ಕೂಡಲಸಂಗಯ್ಯನಂತಲ್ಲದೊಲ್ಲನಯ್ಯಾ .

***

ಛಲಬೇಕು ಶರಣಂಗೆ ಪರಧನವನೊಲ್ಲೆನೆಂಬ,
ಛಲಬೇಕು ಶರಣಂಗೆ ಪರಸತಿಯನೊಲ್ಲೆನೆಂಬ,
ಛಲಬೇಕು ಶರಣಂಗೆ ಪರದೈವವನೊಲ್ಲೆನೆಂಬ,
ಛಲಬೇಕು ಶರಣಂಗೆ ಲಿಂಗಜಂಗಮ ಒಂದೆ ಎಂಬ,
ಛಲಬೇಕು ಶರಣಂಗೆ ಪ್ರಸಾದ ದಿಟವೆಂಬ,
ಛಲವಿಲ್ಲದವರ ಮೆಚ್ಚ ನಮ್ಮ ಕೂಡಲಸಂಗಮದೇವ.

***

ಕಲ್ಲನಾಗರ ಕಂಡರೆ ಹಾಲನೆರೆ ಎಂಬರು
ದಿಟದ ನಾಗರ ಕಂಡರೆ ಕೊಲ್ಲೆಂಬರಯ್ಯ
ಉಂಬ ಜಂಗಮ ಬಂದರೆ ನಡೆ ಎಂಬರು
ಉಣ್ಣದ ಲಿಂಗಕ್ಕೆ ಬೋನವ ಹಿಡಿ ಎಂಬರಯ್ಯ
ನಮ್ಮ ಕೂಡಲ ಸಂಗನ ಶರಣರ ಕಂಡು
ಉದಾಸೀನವ ಮಾಡಿದರೆ
ಕಲ್ಲತಾಗಿದ ಮಿಟ್ಟೆಯಂತಪ್ಪರಯ್ಯ ॥

***

ಬಚ್ಚಲ ನೀರು ತಿಳಿಯಾದರೇನು ?
ಸಲ್ಲದ ಹೊನ್ನು ಮತ್ತೆಲ್ಲಿದ್ದರೇನು
ಆಕಾಶದ ಮಾವಿನ ಫಲವೆಂದರೇನು ?
ಕೊಯ್ಯಲಿಲ್ಲ: ಮೆಲ್ಲಲಿಲ್ಲಾ !
ಕೂಡಲ ಸಂಗನ ಶರಣರ ಅನುಭವವಿಲ್ಲದವರು ಎಲ್ಲಿದ್ದರೇನು ಎಂತಾದರೇನು?



ಕಳಬೇಡ, ಕೊಲಬೇಡ, ಹುಸಿಯ ನುಡಿಯಲು ಬೇಡ
ಮುನಿಯಬೇಡ, ಅನ್ಯರಿಗೆ ಅಸಹ್ಯ ಪಡಬೇಡ
ತನ್ನ ಬಣ್ಣಿಸಬೇಡ, ಇದಿರ ಹಳಿಯಲು ಬೇಡ
ಇದೇ ಅಂತರಂಗ ಶುದ್ಧಿ, ಇದೇ ಬಹಿರಂಗ ಶುದ್ಧಿ
ಇದೇ ನಮ್ಮ ಕೂಡಲ ಸಂಗಮದೇವನೊಲಿಸುವ ಪರಿ ॥

***

ಪುಣ್ಯ ಪಾಪವೆಂಬುವು ತಮ್ಮಿಷ್ಟ ಕಂಡಿರೇ,
'ಅಯ್ಯಾ' ಎಂದಡೆ ಸ್ವರ್ಗ, 'ಎಲವೋ' ಎಂದಡೆ ನರಕ !
"ದೇವಾ, ಭಕ್ತ ಜಯಾ ಜೀಯಾ"
ಎಂಬ ನುಡಿಯೊಳಗೆ ಕೈಲಾಸವಿದ್ದುದೇ, ಕೂಡಲಸಂಗಮದೇವ.

***

ಆನೆಯು ಆ ದಾರಿಯಲ್ಲಿ ಹೋಯಿತ್ತೆಂದಡೆ,
ಆಡೂ ಆ ದಾರಿಯಲ್ಲಿ ಹೋಯಿತ್ತೆನ್ನಬಹುದೇ ?
ಸಂಗನ ಶರಣರಿಗೆ ಆನು ಸರಿಯೆಂದು ಗಳಹಲುಬಹುದೆ?
ಜಂಗಮಕ್ಕೆ ಮಾಡುವ ಭಕ್ತರಿಗೆ ಆನು ಸರಿಯೇ ?
ಹೇಳಾ, ಕೂಡಲಸಂಗಮದೇವಾ.

***

ಪರುಷ ಮುಟ್ಟಿದ ಕಬ್ಬಿನವಾಗದು ನೋಡಾ,
ಲಿಂಗ ಮುಟ್ಟಿದ ಬಳಿಕ ಕುಚಿತ್ತಾಚಾರವಾಗುವದು
ಕೂಡಲಸಂಗಮ ಶರಣರು ಅನ್ಯವನರಿಯರಾಗಿ

***

ಶಟ್ಟವ ಕಟ್ಟಿದ ಬಳಿಕ ಲಕ್ಷಣವನರಸುವರೆ ?
ಲಿಂಗದೇವನ ಪೂಜಿಸಿ ಕುಲವನರಸುವರೆ ಅಯ್ಯಾ,
ಕೂಡಲಸಂಗಮದೇವ
ಭಕ್ತ ಕಾಯ ಮಮ ಕಾಯ" ವೆಂದನಾಗಿ.

"ಏನಿ ಬಂದಿರಿ ಹದುಳವಿದ್ದಿರೆ ?" ಎಂದಡೆ
ನಿಮ್ಮ ಮೈಸಿರಿ ಹಾರಿ ಹೋದುದೆ ?
"ಕುಳ್ಳಿರೆಂ"ದಡೆ ನೆಲ ಕುಳಿಹೋಹುದೆ ?
ಒಡನೆ ನುಡಿದಡೆ ಶಿರ ಹೊಟ್ಟೆಯೊಡೆವುದೆ ?
ಕೊಡಲಿಲ್ಲದಿದ್ದಡೊಂದು ಗುಣವಿಲ್ಲದಿರ್ದಡೆ,
ಕೆಡಹಿ ಮೂಗ ಕೊಯ್ಯದೆ ಮಾಣ್ಬನೆ ಕೂಡಲಸಂಗಮದೇವನು ?

***

ನುಡಿದರೆ ಮುತ್ತಿನ ಹಾರದಂತಿರಬೇಕು
ನುಡಿದರೆ ಮಾಣಿಕ್ಯದ  ದೀಪ್ತಿಯಂತಿರಬೇಕು
ನುಡಿದರೆ ಸ್ಫಟಿಕದ ಶಲಾಕೆಯಂತಿರಬೇಕು
ನುಡಿದರೆ ಲಿಂಗಮೆಚ್ಚಿ ಅಹುದಹುದೆನಬೇಕು
ನುಡಿಯೊಳಗಾಗಿ ನಡೆಯದಿದ್ದರೆ
ಕೂಡಲ ಸಂಗಮದೇವನೆಂತೊಲಿವನಯ್ಯ ॥

***

ಓದುವಾತ ಲೆಂಕನಲ್ಲ, ಬೇಡುವಾತ ಭಕ್ತನಲ್ಲ,
ಓದಲಾಗದು ಲೆಂಕನು, ಬೇಡಲಾಗದು ಭಕ್ತನು
ಓದೆನಯ್ಯಾ, ಬೇಡೆನಯ್ಯಾ
ಕೂಡಲಸಂಗಮದೇವಾ

***

ಗೀತವ ಬಲ್ಲಾತ ಜಾಣನಲ್ಲ,
ಮಾತು ಬಲ್ಲಾತ ಜಾಣನಲ್ಲ,
ಜಾಣನು ಜಾಣನು ಆತ ಜಾಣನು ಲಿಂಗವ ನೆರೆನಂಬಿದಾತ,
ಜಾಣನು ಜಂಗಮಕ್ಕೆ ಸವೆಸುವಾತ,
ಆತ ಜಾಣನು ಜವನ ಬಾಯಲು ಬಾಲವ ಕೊಯ್ದು ಹೋದಾತ;
ಆತ ಜಾಣನು ನಮ್ಮ ಕೂಡಲ ಸಂಗನ ಶರಣನು.



ಬೇವಿನ ಬೀಜವ ಬಿತ್ತಿ, ಬೆಲ್ಲದ ಕಟ್ಟೆಯ ಕಟ್ಟಿ,
ಆಕಳ ಹಾಲನೆರೆದು, ಜೇನ ತುಪ್ಪವ ಹೊಯ್ದರೆ
ಸಿಹಿಯಾಗಬಲ್ಲುದೆ, ಕಹಿಯಾಹುದಲ್ಲದೆ ?
ಶಿವಭಕ್ತರಲ್ಲದವರ ಕೂಡೆ ನುಡಿಯಲಾಗದು,
ಕೂಡಲಸಂಗಮದೇವಾ.

***

ಹುತ್ತವ ಬಡಿದರೆ ಹಾವು ಸಾವುದೇ ಅಯ್ಯ ?
ಅಘೋರ ತಪವ ಮಾಡಿದರೇನು ?
ಅಂತರಂಗ - ಆತ್ಮ ಶುದ್ಧಿಯಿಲ್ಲದವರನೆಂತು
ನಂಬುವನಯ್ಯ ಕೂಡಲ ಸಂಗಮದೇವ !

***

ಲೇಸೆನಿಸಿಕೊಂಡು ಐದು ದಿನ ಬದುಕಿದರೇನು ?
ಲೇಸೆನಿಸಿಕೊಂಡು ನಾಲ್ಕು ದಿನ ಬದುಕಿದರೇನು ?
ಲೇಸೆನಿಸಿಕೊಂಡು ಮೂರು ದಿನ ಬದುಕಿದರೇನು ?
ಲೇಸೆನಿಕೊಂಡು ಎರಡು ದಿನ ಬದುಕಿದರೇನು ?
ಕೂಡಲಸಂಗನ ಶರಣರ ವಚನದಲ್ಲಿ ಲೇಸೆನಿಸಿಕೊಂಡು
ಒಂದು ದಿನ ಬದುಕಿದರೇನೋ ?

***

ಶಿವಚಿಂತೆ ಶಿವಜ್ಞಾನವಿಲ್ಲದ ಮನಜರು
ಸಗಣಕ್ಕೆ ಸಾಸಿರ ಹುಳು ಹುಟ್ಟವೆ ದೇವಾ ?
ಕಾಡಮೃಗವೊಂದಾಗಿರಲಾಗದೆ ದೇವಾ ?
ಊರ ಮೃಗವೊಂದಾಗಿರಲಾಗದೆ ಹರನೆ ?
ನಮ್ಮ ಕೂಡಲ ಸಂಗನ ಶರಣರಿಲ್ಲದ
ಊರು, ದೇಶ, ವನವಾಸ, ನರಬಂಧ್ಯ ಕಾಣಿರಣ್ಣಾ !

ಕಾಗೆಯೊಂದಗುಳ ಕಂಡರೆ
ಕರೆಯದೇ ತನ್ನ ಬಳಗವೆಲ್ಲವ ?
ಕೋಳಿಯೊಂದು ಕುಟುಕ ಕಂಡರೆ
ಕೂಗಿ ಕರೆಯದೇ ತನ್ನ ಕುಲವೆಲ್ಲವ ?
ಶಿವ ಭಕ್ತನಾಗಿ ಭಕ್ತಿ ಪಕ್ಷವಿಲ್ಲದಿದ್ದರೆ
ಆ ಕಾಗೆ ಕೋಳಿಯಿಂದ ಕರಕಷ್ಟ
ಕೂಡಲ ಸಂಗಮದೇವ ॥

***

ಕೊಲುವನೇ ಮಾದಿಗ, ಹೊಲಸ ತಿಂಬುವನೇ ಹೊಲೆಯ !
ಕುಲವೇನೋ, ಅವಂದಿರ ಕುಲವೇನೋ ?
ಸಕಲ ಜೀವಾತ್ಮರಿಗೆ ಲೇಸನೇ ಬಯಸುವ
ನಮ್ಮ ಕೂಡಲಸಂಗನ ಶರಣರೇ ಕುಲಜರು.

***

ದೇವಸಹಿತ ಭಕ್ತ ಮನೆಗೆ ಬಂದಡೆ
ಕಾಯಕವಾವುದೆಂದು ಬೆಸಗೊಂಡಡೆ, ನಿಮ್ಮಾಣೆ !
ನಿಮ್ಮ ಪುರಾತನರಾಣೆ ! ತಲೆದಂಡ ! ತಲೆದಂಡ !
ಕೂಡಲಸಂಗಮದೇವಾ,
ಭಕ್ತರ ಕುಲವನರಸಿದಡೆ ನಿಮ್ಮ ರಾಣಿವಾಸದಾಣೆ !

***

ಹರನೀವ ಕಾಲಕ್ಕೆ ಸಿರಿಯು ಬೆನ್ನಲ್ಲಿ ಬರ್ಕು,
ಹರಿದು ಹೆದ್ದೊರೆಯೆ ಕೆರೆ ತುಂಬಿದಂತಯ್ಯಾ !
ನೆರೆಯದ ವಸ್ತು ನೆರೆವುದು ನೋಡಯ್ಯಾ !
ಅರಸು ಪರಿವಾರ ಕೈವಾರ ನೋಡಯ್ಯಾ
ಪರಮ ನಿರಂಜನನೆ ಮರೆದ ಕಾಲಕ್ಕೆ
ತುಂಬಿದ ಹರವಿಗೆ ಕಲ್ಲು ಕೊಂಡಂತೆ ಕೂಡಲ ಸಂಗವದೇವಾ.



ಗಂಡ ಶಿವಲಿಂಗದೇವರ ಭಕ್ತ,
ಹೆಂಡತಿ ಮಾರಿ ಮಸಣಿಯ ಭಕ್ತೆ !
ಗಂಡ ಕೊಂಬುದು ಪಾದೋದಕ ಪ್ರಸಾದ :
ಹೆಂಡತಿ ಕೊಂಬುದು ಸುರೆ ಮಾಂಸ !
ಭಾಂಡ-ಭಾಜನ ಶುದ್ಧವಿಲ್ಲದವರ ಭಕ್ತಿ,
ಹೆಂಡದ ಮಡಕೆಯ ಹೊರಗೆ ತೊಳೆದಂತೆ
ಕೂಡಲಸಂಗಮದೇವಾ.

***

ಅಂಗದಿಚ್ಛೆಗೆ ಮದ್ಯಮಾಂಸವ ತಿಂಬರು :
ಕಂಗಳಿಚ್ಛೆಗೆ ಪರವಧುವ ನೆರೆವರು,
ಲಿಂಗಲಾಂಛನಧಾರಿಯಾದಲ್ಲಿ ಫಲವೇನು ?
ಲಿಂಗಪಥವ ತಪ್ಪಿ ನಡೆವರು.
ಜಂಗಮ ಮುಖದಿಂದೆ ನಿಂದೆ ಬಂದರೆ,
ಕೊಂಡ ಮಾರಿಂಗೆ ಹೋಹುದು ತಪ್ಪದು ಕೂಡಲಸಂಗಮದೇವ.

***

ಆಡಿಹರಯ್ಯಾ ಹಾಡಿಹರಯ್ಯ ಮನಬಂದ ಪರಿಯಲಿ,
ಶಿವಶರಣರ ಮುಂದೆ ಆ(ಡಿ)ರಯ್ಯ ಕೋಡಂಗಿಯಾಟವನಾಡಿದ
ಭಕ್ತಂಗೆ ಬೇಡಿತ್ತನೀವ ನಮ್ಮ ಕೂಡಲಸಂಗಮದೇವ.

***

ನಾದಪ್ರಿಯ ಶಿವನೆಂಬರು ನಾದಪ್ರಿಯ ಶಿವನಲ್ಲಯ್ಯ,
ವೇದಪ್ರಿಯ ಶಿವನೆಂಬುವರು ವೇದಪ್ರಿಯ ಶಿವನಲ್ಲವಯ್ಯ,
ನಾದವ ಮಾಡಿದ ರಾವಣಂಗೆ ಅರೆಯಾಯುಷ್ಯವಾಯಿತ್ತು,
ವೇದವನೋದಿದ ಬ್ರಹ್ಮನ ಶಿರಹೋಯಿತ್ತು !
ನಾದಪ್ರಿಯನೂ ಅಲ್ಲ, ವೇದಪ್ರಿಯನೂ ಅಲ್ಲ,
ಭಕ್ತಿಪ್ರಿಯ ನಮ್ಮ ಕೂಡಲಸಂಗಮದೇವ.

ಓಡೆತ್ತ ಬಲ್ಲುದು ಅವಲಕ್ಕಿಯ ಸವಿಯ ?
ಕೋಡಗ ಬಲ್ಲುದೆ ಸೆಳೆಮಂಚದ ಸುಖವ ?
ಕಾಗೆ ನಂದನ ಬನದೊಳಗಿರ್ದಡೇನು,
ಕೋಗಿಲೆಯಾಗಬಲ್ಲುದೇ? ಹೇಳಾ.
ಕೊಳನ ತಡಿಯಲೊಂದು ಹೊರಸು ಹುಟ್ಟಿರ್ದಡೇನು,
ಗಳಹಂಸೆಯಾಗಬಲ್ಲುದೆ, ಕೂಡಲಸಂಗಮದೇವಾ ?

***

ಹಬ್ಬಕ್ಕೆ ತಂದ ಹರಕೆಯ ಕುರಿ
ತೋರಣಕ್ಕೆ ತಂದ ತಳಿರ ಮೇಯಿತ್ತು
ಕೊಂದಹರೆಂಬುದನರಿಯದೆ
ಬೆಂದೊಡಲ ಹೊರೆವುತ್ತಲದೆ
ಅದಂದೆ ಹುಟ್ಟಿತು ! ಅದಂದೆ ಹೊಂದಿತ್ತು !
ಕೊಂದವರುಳಿವರೆ ಕೂಡಲ ಸಂಗಮದೇವ ? ॥

***

ನೀರ ಕಂಡಲ್ಲಿ ಮುಳುಗುವರಯ್ಯಾ .
ಮರನ ಕಂಡಲ್ಲಿ ಸುತ್ತುವರಯ್ಯಾ !
ಬತ್ತುವ ಜಲವನೊಣಗುವ ಮರನ ಮೆಚ್ಚಿದವರು
ನಿಮ್ಮನೆತ್ತಬಲ್ಲರು ಕೂಡಲಸಂಗಮದೇವಾ ?

***

ಗೀತವ ಹಾಡಿದಡೇನು ?
ಶಾಸ್ತ್ರ - ಪುರಾಣವ ಕೇಳಿದಡೇನು ?
ವೇದ ವೇದಾಂತವನೋದಿದೊಡೇನು ?
ಮನವೊಲಿದು ಲಿಂಗ ಜಂಗಮವ ಪೂಜಿಸಲರಿಯದವರು
ಎಲ್ಲ ಬಲ್ಲ ಅನುಭಾವಿಯಾದೊಡೇನು ?
ಭಕ್ತಿಯಿಲ್ಲದವರನೊಲ್ಲ ಕೂಡಲಸಂಗಮದೇವ.



ಅನ್ನವನಿಕ್ಕಿದಡೆ ಪುಣ್ಯವಹುದು
ವಸ್ತ್ರವ ಕೊಟ್ಟಡೆ ಧರ್ಮವಹುದು
ಹಿರಣ್ಯವ ಕೊಟ್ಟಡೆ ಶ್ರೀಯಹುದು
ತ್ರಿಕರಣ ಶುದ್ಧವಾಗಿ ನೆನೆದಡೆ
ಮುಕ್ತಿಯಹುದು ಕೂಡಲ ಸಂಗಮದೇವ ॥

***

ಲೇಸ ಕಂಡು ಮನ ಬಯಸಿ ಬಯಸಿ
ಆಸೆ ಮಾಡಿದಡಿಲ್ಲ ಕಂಡಯ್ಯಾ
ತಾಳಮರಕ್ಕೆ ಕೈಯ ನೀಡಿ
ಮೇಲೆ ನೋಡಿ ಗೋಣು ನೊಂದುದಯ್ಯಾ
ಕೂಡಲ ಸಂಗಮದೇವಾ ಕೇಳಯ್ಯಾ,
ನೀನೀವ ಕಾಲಕ್ಕಲ್ಲದಿಲ್ಲ ಕಂಡಯ್ಯಾ !

***

ಮಾಡುವ ನೀಡುವ ಭಕ್ತನ ಕಂಡಡೆ
ನಿಧಿನಿಧಾನವ ಕಂಡಂತಾಯಿತ್ತು,
ಪಾದೋದಕ ಪ್ರಸಾದ ಜೀವಿಯ ಕಂಡಡೆ
ಹೋದ ಪ್ರಾಣ ಬಂದಂತಾಯಿತ್ತು,
ಅನ್ಯರ ಮನೆಗೆ ಹೋಗಿ ತನ್ನುದರವ ಹೊರೆಯದ
ಅಚ್ಚ ಶರಣರ ಕಂಡರೆ ನಿಶ್ಚಯವಾಗಿ ಕೂಡಲಸಂಗಯ್ಯನೆಂಬೆನು.

***

ತನುವಕೊಟ್ಟು ಗುರುವನೊಲಿಸಬೇಕು
ಮನವ ಕೊಟ್ಟು ಲಿಂಗವನೊಲಿಸಬೇಕು.
ಈ ತ್ರಿವಿಧವ ಹೊರಗು ಮಾಡಿ ಹರೆಯ ಹೊಯಿಸಿ,
ಕುರುಹ ಪೂಜಿಸುವರ ಮೆಚ್ಚ
ಕೂಡಲಸಂಗಮದೇವ.

ನುಡಿಯಲ್ಲಿ ಎಚ್ಚೆತ್ತು ನಡೆಯಲ್ಲಿ ತಪ್ಪಿದಡೆ,
ಹಿಡಿದಿರ್ದ ಲಿಂಗವು ಘಟಸರ್ಪನಂತೆ !
ನುಡಿಯಲು ಬಾರದು, ನಡೆಯಲು ಬಾರದು .
ಲಿಂಗದೇವನೆ ದಿವ್ಯವೊ ಅಯ್ಯಾ !
ಬಡವನ ಕೋಪ ಅವುಡಿಗೆ ಮೃತ್ಯುವಾದಂತೆ,
ಕಡೆದಾಂಟದು ಕಾಣಾ ಕೂಡಲಸಂಗಮದೇವಾ.

***

ನಾನು ಆರಂಬವ ಮಾಡುವೆನಯ್ಯಾ ಗುರುಪೂಜೆಗೆಂದು,
ನಾನು ಬೆವಹಾರವ ಮಾಡುವೆನಯ್ಯಾ ಲಿಂಗಾರ್ಚನೆಗೆಂದು,
ನಾನು ಪರಸೇವೆಯ ಮಾಡುವೆನಯ್ಯಾ
ಜಂಗಮದಾಸೋಹಕ್ಕೆಂದು
ನಾನಾವ ಕರ್ಮಂಗಳ ಮಾಡಿದಡೆಯೂ ಆ ಕರ್ಮಫಲಭೋಗವ
ನೀ ಕೊಡುವೆಯೆಂಬುದ ನಾನು ಬಲ್ಲೆನು.
ನೀ ಕೊಟ್ಟ ದ್ರವ್ಯದ ನಿಮಗಲ್ಲದೆ
ಮತ್ತೊಂದು ಕ್ರೀಯ ಮಾಡೆನು :
ನಿಮ್ಮ ಸೊಮ್ಮಿಂಗೆ ಸಲಿಸುವೆನು ನಿಮ್ಮಾಣೆ !
ಕೂಡಲಸಂಗಮದೇವಾ.

***

ಉದಯದ ಮಾಗಿಯ ಬಿಸಿಲು ಅಂಗಕ್ಕೆ ಹಿತವಾಯಿತ್ತು,
ಮಧ್ಯಾಹ್ನದ ಬಿಸಿಲು ಅಂಗಕ್ಕೆ ಕರಕಠಿಣವಾಯಿತ್ತು,
ಮೊದಲಲ್ಲಿ ಲಿಂಗಭಕ್ತಿ ಹಿತವಾಯಿತ್ತು,
ಕಡೆಯಲ್ಲಿ ಜಂಗಮ ಭಕ್ತಿ ಕಠಿಣವಾಯಿತ್ತು,
ಇದು ಕಾರಣ ಕೂಡಲಸಂಗಮದೇವನವರ
ಬಲ್ಲನಾಗಿ ಒಲ್ಲನಯ್ಯಾ.



ಲಿಂಗಕ್ಕಲ್ಲದೆ ಮಾಡೆನೀ ಮನವನು.
ಜಂಗಮಕ್ಕಲ್ಲದೆ ಮಾಡೆನೀ ಧನವನು.
ಪ್ರಸಾದಕ್ಕಲ್ಲದೆ ಮಾಡೆನೀ ತನುವನು.
ಲಿಂಗ ಜಂಗಮದ ಪ್ರಸಾದಕ್ಕಲ್ಲದೆ
ಬಾಯ್ದೆರೆಯೆನುಂಬುದೆನ್ನ ಭಾಷೆ.
ಅನರ್ಪತವಾದಡೆ ತಪ್ಪೆನ್ನದು,
ಮೂಗ ಕೊಯಿ ಕೂಡಲಸಂಗಮದೇವಾ.

***

ನಡೆಯಲರಿಯದೆ ನುಡಿಯಲರಿಯದೆ
ಲಿಂಗವ ಪೂಜಿಸಿ ಫಲವೇನು?
ಅವರ ಸುಖವೆನ್ನ ಸುಖ, ಅವರ ದುಃಖವೆನ್ನ ದುಃಖ !
ಕೂಡಲಸಂಗನ ಶರಣರ ಮನನೊಂದರೆ ಆನು ಬೆಂದೆನಯ್ಯಾ !

***

ಹರಿವ ಹಾವಿಗಂಜೆ ! ಉರಿಯ ನಾಲಗೆಗಂಜೆ
ಸುರಗಿಯ ಮೊನೆಗಂಜೆ !
ಒಂದಕ್ಕಂಜುವೆನೊಂದಕ್ಕಳುಕುವೆ !
ಪರಸ್ತ್ರೀ-ಪರಧನವೆಂಬೀ ಜೂಜಿಂಗಂಜುವೆ !
ಮುನ್ನಂಜದ ರಾವಣನೇ ವಿಧಿಯಾದ !
ಅಂಜುವೆನಯ್ಯ ಕೂಡಲ ಸಂಗಮದೇವ ॥

***

ಹಾಲನೇಮ, ಹಾಲ ಕೆನೆಯ ನೇಮ,
ಕೆನೆ ತಪ್ಪಿದ ಬಳಿಕ ಕಿಚ್ಚಡಿಯ ನೇಮ,
ಬೆಣ್ಣೆಯ ನೇಮ, ಬೆಲ್ಲದ ನೇಮ !
ಅಂಬಲಿಯ ನೇಮದವರನಾರನೂ ಕಾಣೆ,
ಕೂಡಲಸಂಗನ ಶರಣರಲ್ಲಿ ಅಂಬಲಿಯ ನೇಮದಾತ
ಮಾದರ ಚೆನ್ನಯ್ಯ

ಎನ್ನ ನಡೆಯೊಂದು ಪರಿ, ಎನ್ನ ನುಡಿಯೊಂದು ಪರಿ.
ಎನ್ನೊಳಗೇನೂ ಶುದ್ಧವಿಲ್ಲ ನೋಡಯ್ಯಾ,
ನುಡಿಗೆ ತಕ್ಕ ನಡೆಯ ಕಂಡೊಡೆ,
ಕೂಡಲಸಂಗಮದೇವನೊಳಗಿರ್ಪನಯ್ಯಾ.

***

ಆನೆಯನೇರಿಕೊಂಡು ಹೋದಿರೆ ನೀವು,
ಕುದುರೆಯನೇರಿಕೊಂಡು ಹೋದಿರೆ ನೀವು,
ಕುಂಕುಮ ಕಸ್ತೂರಿಯ ಪೂಸಿಕೊಂಡು ಹೋದಿರೆ, ಅಣ್ಣಾ !
ಸತ್ಯದ ನಿಲವನರಿಯದೆ ಹೋದಿರಲ್ಲಾ ;
ಸದ್ಗುಣವೆಂಬ ಫಲವ ಬಿತ್ತಿ ಬೆಳೆಯದೆ ಹೋದಿರಲ್ಲಾ !
ಅಹಂಕಾರವೆಂಬಸದ ಮದಗಜವೇರಿ
ವಧೆಗೆ ಗುರಿಯಾಗಿ ನೀವು ಹೋದಿರಲ್ಲಾ !
ನಮ್ಮ ಕೂಡಲಸಂಗಮದೇವರನರಿಯದೆ
ನರಕಕ್ಕೆ ಭಾಜನವಾದಿರಲ್ಲಾ !

***

ಮಾಡಿ ಮಾಡಿ ಕೆಟ್ಟರು ಮನವಿಲ್ಲದೆ,
ನೀಡಿ ನೀಡಿ ಕೆಟ್ಟರು ನಿಜವಿಲ್ಲದೆ
ಮಾಡುವ ನೀಡುವ ನಿಜಗುಣವುಳ್ಳಡೆ ಕೂಡಿಕೊಂಬ
ನಮ್ಮ ಕೂಡಲಸಂಗಮದೇವಾ

***

ಇತ್ತ ಬಾರಯ್ಯಾ, ಇತ್ತಬಾರಯ್ಯಾ ಎಂದು
ಭಕ್ತರೆಲ್ಲರೂ ಕೂರ್ತು ಹತ್ತೆ ಕರೆಯುತಿರೆ,
ಮತ್ತೆ ಕೆಲಕ್ಕೆ ಹೋಗಿ, ಶರಣೆಂದು ಹಸ್ತಬಾಯನೆ ಮುಚ್ಚಿ:
ಕಿರಿದಾಗಿ, ಭೃತ್ಯಾಚಾರವ ನುಡಿದು ವಿನಯ ವಿಧ್ಯಾನವುಳ್ಳವರ
ಎತ್ತಿಕೊಂಬನಯ್ಯಾ ಕೂಡಲಸಂಗಮದೇವ ಪ್ರಮಥರ ಮುಂದೆ.



ಮನೆಯೊಳಗೆ ಮನೆಯೊಡೆಯನಿದ್ದಾನೊ ಇಲ್ಲವೊ ?
ಹೊಸ್ತಿಲಲ್ಲಿ ಹುಲ್ಲುಹುಟ್ಟಿ, ಮನೆಯೊಳಗೆ ರಜತುಂಬಿ,
ಮನೆಯೊಳಗೆ ಮನೆಯೊಡೆಯನಿದ್ದಾನೋ, ಇಲ್ಲವೋ ?
ತನುವಿನೊಳಗೆ ಹುಸಿ ತುಂಬಿ, ಮನದೊಳಗೆ ವಿಷಯ ತುಂಬಿ,
ಮನೆಯೊಳಗೆ ಮನೆಯೊಡೆಯನಿಲ್ಲ ಕೂಡಲಸಂಗಮದೇವ.

***

ಲೋಕದ ಡೊಂಕ ನೀವೇಕೆ ತಿದ್ದುವಿರಿ ?
ನಿಮ್ಮ ನಿಮ್ಮ ತನುವ ಸಂತೈಸಿಕೊಳ್ಳಿ ;
ನಿಮ್ಮ ನಿಮ್ಮ ಮನವ ಸಂತೈಸಿಕೊಳ್ಳಿ
ನೆರೆಮನೆಯ ದುಃಖಕ್ಕೆ ಅಳುವವರ ಮೆಚ್ಚ
ಕೂಡಲಸಂಗಮದೇವ.

***

ಅರ್ಥಕ್ಕೆ ತಪ್ಪಿದರೇನು ?
ಪ್ರಾಣಕ್ಕೆ ತಪ್ಪಿದರೇನು ?
ಅಭಿಮಾನಕ್ಕೆ ತಪ್ಪಿದರೇನು ?
ಶರಣರು ಶರಣರಲ್ಲಿ ಗುಣವರಸುವರೆ ?
ಕೂಡಲ ಸಂಗನ ಶರಣರುನೊಂದು ಸೈರಿಸಬೇಕು.

***

ಕಾಮಧೇನು ನಿಮ್ಮ ಸಾರಿರಲು ಪರರ ಬೇಡಲಾರೆನಯ್ಯಾ.
ನಿಮ್ಮವ ಪೂಜಿಸಿ ಭವಬಂಧನ ಬಿಡದೇಕಯ್ಯಾ ?
ಹಿಂದಣ ಜನ್ಮದ ಚಿಹ್ನೆ ಬಿಡದನ್ನಕ್ಕ ?
ನಿಮ್ಮವ ಪೂಜಿಸಿ ಏವೆನಯ್ಯಾ
ಎನ್ನ ಮನದ ಅವಗುಣವ ಕಳೆದು ನಿಮ್ಮ ಶರಣರಿಗೆ
ಶರಣೆಂಬುದು ಕರುಣಿಸು ಕೂಡಲಸಂಗಮದೇವಾ.

ಕುದುರೆ-ಸತ್ತಿಗೆಯರ ಕಂಡಡೆ
ಹೊರಳಿ ಬಿದ್ದು ಕಾಲ ಹಿಡಿವರು :
ಬಡ ಭಕ್ತರು ಬಂದಡೆ 'ಎಡೆಯಿಲ್ಲ, ಅತ್ತ ಸನ್ನಿ, ಎಂಬರು !
ಎನ್ನೊಡೆಯ ಕೂಡಲಸಂಗಯ್ಯನವರ ತಡಗೆಡಹಿ
ಮೂಗ ಕೊಯ್ಯದೆ ಮಾಣ್ಬನೆ ?

***

ಹಾವು ತಿಂದವರ ನುಡಿಸಬಹುದು :
ಗರ ಹೊಡೆದವರ ನುಡಿಸಬಹುದು :
ಸಿರಿಗರ ಹೊಡೆದವರ ನುಡಿಸಲು ಬಾರದು ನೋಡಯ್ಯಾ !
ಬಡತನವೆಂಬ ಮಂತ್ರವಾದಿ ಹೊಗಲು
ಒಡನೆ ನುಡಿವರು ಕೂಡಲಸಂಗಮದೇವಾ.

***

ಜ್ಞಾನದ ಬಲದಿಂದ ಅಜ್ಞಾನದ ಕೇಡು ನೋಡಯ್ಯ
ಜ್ಯೋತಿಯ ಬಲದಿಂದ ತಮಂಧದ ಕೇಡು ನೋಡಯ್ಯ
ಸತ್ಯದ ಬಲದಿಂತ ಅಸತ್ಯದ ಕೇಡು ನೋಡಯ್ಯ
ಪರುಷದ ಬಲದಿಂದ ಅವಲೋಹದ ಕೇಡು ನೋಡಯ್ಯ
ಕೂಡಲ ಸಂಗನ ಶರಣರ ಅನುಭಾವದಿಂದ
ಎನ್ನ ಭವದ ಕೇಡು ನೋಡಯ್ಯ

***

ಧೃತಿಗೆಟ್ಟು ಅನ್ಯರ ಬೇಡದಂತೆ,
ಮತಿಗೆಟ್ಟು 'ಪರರ ಹೊಗಳದಂತೆ,
ಪರಸತಿಯರ ರತಿಗೆ ಮನಹಾರದಂತೆ,
ಶಿವಪಥವೊಲ್ಲದವರೊಡನಾಡದಂತೆ
ಅನ್ಯಜಾತಿಯ ಸಂಗವ ಮಾಡದಂತೆ
ನನ್ನ ಪ್ರತಿಪಾದಿಸು ಕೂಡಲಸಂಗಮದೇವಾ



ಅತ್ತಲಿತ್ತಹೋಗದಂತೆ ಹೆಳವನ ಮಾಡಯ್ಯ ತಂದೆ !
ಸುತ್ತಿಸುಳಿದು ನೋಡದಂತೆ ಅಂಧಕನ ಮಾಡಯ್ಯ ತಂದೆ !
ಮತ್ತೊಂದ ಕೇಳದಂತೆ ಕಿವುಡನ ಮಾಡಯ್ಯ ತಂದೆ !
ನಿಮ್ಮ ಶರಣರ ಪಾದವಲ್ಲದೆ !
ಅನ್ಯ ವಿಷಯಕ್ಕೆಳೆಸದಂತಿರಿಸು ಕೂಡಲ ಸಂಗಮದೇವ ॥

***

ಎಲವದ ಮರ ಹೂತು ಫಲವಾದ ತೆರನಂತೆ,
ಸಿರಿಯಾದಡೇನು ಶಿವಭಕ್ತಿಇಲ್ಲದನ್ನಕ್ಕ ?
ಫಲವಾದಡೇನು ಹಾವು, ಮೆಕ್ಕೆಯ ಕಾಯಿ ?
ಕುಲವಿಲ್ಲದ ರೂಹು ಎಲ್ಲಿದ್ದಡೇನು ?
ಬಚ್ಚಲ ನೀರು ತಿಳಿದಲ್ಲಿ ಫಲವೇನು ?
ಅವಗುಣಿಗಳ ಮೆಚ್ಚ ಕೂಡಲಸಂಗಮದೇವ.

***

ಸಾರ ! ಸಜ್ಜನರ ಸಂಗವ ಮಾಡುವುದು.
ದೂರ ! ದುರ್ಜನರ ಸಂಘ ಬೇಡವಯ್ಯಾ.
ಆವ ಹಾವಾದಡೇನು ? ವಿಷವೊಂದೆ.
ಅಂತವರ ಸಂಗ ಬೇಡವಯ್ಯಾ.
ಅಂತರಂಗ ಶುದ್ಧವಿಲ್ಲದವರ ಸಂಗ
ಸಿಂಗಿ ಕಾಳಕೂಟ ವಿಷವೊ ಕೂಡಲಸಂಗಮದೇವ !

***

ಮತಿಮಂದನಾಗಿ ಗತಿಯ ಕಾಣದೆ ಇರ್ದೆನಯ್ಯಾ.
ಹುಟ್ಟು ಗುರುಡನ ಕೈಯ್ಗೆಕೋಲಕೊಟ್ಟು ನಡೆಸುವಂತೆ ನಡೆಸಯ್ಯಾ,
ಎನ್ನಾ; ನಿಮ್ಮಚ್ಚ ಶರಣರ ಒಕ್ಕುದ ಮಿಕ್ಕುದ ನಚ್ಚಿಸು,
ಮೆಚ್ಚಿಸು ಕೂಡಲ ಸಂಗಮದೇವಾ

ನೋಡಲಾಗದು ನುಡಿಯಲಾಗದು ಪರಸ್ತ್ರೀಯ,
ಬೇಡ ಕಾಣಿರೋ !
ತಗರ ಬೆನ್ನಲಿ ಹಲಿವ ಸೊಣಗನಂತೆ, ಬೇಡ ಕಾಣಿರೋ !
ಒಂದಾಶೆಗೆ ಸಾಸಿರ ವರುಷ ನರಕದೊಳದ್ದುವ
ಕೂಡಲಸಂಗವದೇವ.

***

ತುಪ್ಪದ ಸವಿಗೆ ಅಲಗ ನೆಕ್ಕುವ ಸೊಣಗನಂತೆ, ಎನ್ನ ಬಾಳುವೆ !
ಸಂಸಾರಸಂಗವ ಬಿಡುವ ನೋಡೆನ್ನ ಮನವು.
ಈ ನಾಯಿತನವ ಮಾಣಿಸು :
ಕೂಡಲಸಂಗವದೇವಾ, ನಿಮ್ಮ ಧರ್ಮ ?

***

ಹಾವಿನ ಬಾಯ ಕಪ್ಪೆ ಹಸಿದು
ಹಾರುವ ನೊಣಕ್ಕೆ ಆಸೆ ಮಾಡುವಂತೆ,
ಸೂಲವನೇರುವ ಕಳ್ಳನು
ಹಾಲು ತುಪ್ಪವ ಕುಡಿದು ಮೇಲೇಸು ಕಾಲ ಬದುಕುವನೊ ?
ಕೆಡುವೊಡಲ ನಚ್ಚಿ, ಹುಡುಹುಸಿಯನೆ ಹುಸಿದು, ಒಡಲ ಹೊರೆವರ
ಕೂಡಲಸಂಗವದೇವನರನೊಲ್ಲ ಕಾಣಿರಣ್ಣಾ.

***

ಕಾಣದುದೆಲ್ಲವ ಕಾಣಲಾರೆನಯ್ಯಾ,
ಕೇಳದುದವೆಲ್ಲವ ಕೇಳಲಾರೆನಯ್ಯಾ,
ದ್ರೋಹವಿಲ್ಲವೆಮ್ಮ ಶಿವನಲ್ಲಿ,
ಸೀಮೆಯಯ್ಯಾ ! ಒಲೆಯ ಮುಂದಿದ್ದು ಮಾಡದ
ಕನಸ ಕಾಣ್ಬವರನೊಲ್ಲನಯ್ಯಾ ಕೂಡಲ ಸಂಗಮದೇವಾ.



ಊರ ಸೀರೆಗೆ ಅಗಸ ತಡಬಡಿಹಡೆದಂತೆ,
ಹೊನ್ನೆನ್ನದು, ಹೆಣ್ಣೆನ್ನದು, ಮಣ್ಣೆನ್ನದೆಂದು ಮರುಳಾದೆ :
ನಿಮ್ಮ ನಲಿಯದ ಕಾರಣ ಕೆಮ್ಮನೆ ಕೆಟ್ಟೆ,
ಕೂಡಲಸಂಗವದೇವಾ ?

***

ಇಂದಿಗೆಂತು ನಾಳಿಗೆಂತು ಎಂದು
ಬೆಂದೊಡಲ ಹೊರೆಯ ಹೋಯಿತ್ತೆನ್ನ ಸಂಸಾರ !
ಹಿಂದೆ ನಾನಾಯೋನಿಯಲ್ಲಿ ಬಂದೆನೆಂಬ ಹೇಯಬಿಲ್ಲ !
ಮುಂದೆ ಮುಕ್ತಿಯಾಗಬೇಕೆಂಬ ಯುಕ್ತಿಯಿಲ್ಲ !
ಎಂದೆಂದೂ ಸದಾಶಿವನ ಕುಂದದೆ ನೆನೆಯಲೀಯದೆ
ಕೊಂದುದಯ್ಯಾ ಈ ಮಾಯೆ ಕೂಡಲಸಂಗವದೇವಾ.

***

ವಿಷಯವೆಂಬ ಹಸುರನೆನ್ನ ಮುಂದೆ ತಂದು ಪಸರಿಸಿದೆಯಯ್ಯಾ.
ಪಶುವೇನಬಲ್ಲದು ? ಹಸುರಂದೆಳಸುವುದು.
ವಿಷಯರಹಿತನ ಮಾಡಿ, ಭಕ್ತಿರಸವ ದಣಿಯೆ ಮೇಯಿಸಿ,
ಸುಬುದ್ಧಿಯೆಂಬುದಕವನೆರೆದು,
ನೋಡಿ ಸಲಹಯ್ಯಾ ಕೂಡಲಸಂಗವದೇವಾ.

***

ಅರಸಿನವನೆ ಮಿಂದು, ಹೊಂದೊಡಿಗೆಯನೆ ತೊಟ್ಟು,
ಪುರುಷನ ಒಲವಿಲ್ಲದ ಲಲನೆಯಂತಾಗಿರ್ದೆನಯ್ಯಾ !
ವಿಭೂತಿಯನೆ ಹೂಸಿ, ರುದ್ರಾಕ್ಷಿಯನೆ ಕಟ್ಟಿ,
ಶಿವ ನಿಮ್ಮೊಲವಿಲ್ಲದಂತೆ ಆಗಿರ್ದೆನಯ್ಯಾ !
ಕೆಟ್ಟು ಬಾಳವವರಿಲ್ಲಾ ಎಮ್ಮವರ ಕುಲದಲ್ಲಿ.
ನೀನೊಲಿದಂತೆ ಸಲಹಯ್ಯಾ ಕೂಡಲಸಂಗಮದೇವಾ.

ಜಗವ ಸುತ್ತಿಪ್ಪುದು ನಿನ್ನ ಮಾಯೆಯಯ್ಯಾ.
ನಿನ್ನ ಸುತ್ತಿಪ್ಪುದು ಎನ್ನ ಮನ ನೋಡಯ್ಯಾ !
ನೀನು ಜಗಕ್ಕೆ ಬಲ್ಲಿದನು. ಆನು ನಿನಗೆ ಬಲ್ಲಿದನು ಕಂಡಯ್ಯಾ !
ಕರಿಯ ಕನ್ನಡಿಯೊಳಗಡಗಿದಂತಯ್ಯಾ :
ಎನ್ನೊಳಗೆ ನೀನಡಗಿದೆ ಕೂಡಲಸಂಗವದೇವಾ !

***

ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟವಯ್ಯಾ.
ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರಯ್ಯಾ :
ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲರಯ್ಯಾ.
ಕೂಡಲಸಂಗವದೇವಾ.

***

ಮರಕ್ಕೆ ಬಾಯಿ ಬೇರೆಂದು ತಳಕ್ಕೆ ನೀರನೆರೆದಡೆ
ಮೇಲೆ ಪಲ್ಲವಿಸಿತ್ತುನೋಡಾ
ಲಿಂಗದ ಬಾಯಿ ಜಂಗನಮವೆಂದು ಪಡೆಪದಾರ್ಥವ ನೀಡಿದಡೆ
ಮುಂದೆ ಸಕಳಾರ್ಥವನೀವನು.
ಆ ಜಂಗಮವ ಹರನೆಂದು ಕಂಡು ನರನೆಂದು ಭಾವಿಸಿದಡೆ
ನರಕ ತಪ್ಪದು ಕಾಣಾ ಕೂಡಲ ಸಂಗವದೇವ ॥

***

ಬೆಲ್ಲವ ತಿಂದ ಕೋಡಗನಂತೆ ಸಿಹಿಯ ನೆನೆಯದಿರಾ ಮನವೇ.
ಕಬ್ಬ ತಿಂದ ನರಿಯಂತೆ ಹಿಂದಕ್ಕೆಳಸದಿರಾ ಮನವೇ.
ಗಗನವನಡರಿದ ಕಾಗೆಯಂತೆ
ದೆಸೆದೆಸೆಗೆ ಹಂಬಲಿಸದಿರಾ ಮನವೇ.
ಕೂಡಲಸಂಗನ ಶರಣರ ಕಂಡು ಲಿಂಗವೆಂದೇ ನಂಬು ಮನವೇ.



ತನ್ನಿಚ್ಛೆಯ ನುಡಿದಡೆ ನಚ್ಚುವುದೀ ಮನವು.
ಇದಿರಿಚ್ಛೆಯ ನುಡಿದಡೆ ಮೆಚ್ಚದೀ ಮನವು.
ಕೂಡಲಸಂಗನ ಶರಣರ ನಚ್ಚದ ಮನವ ಕಿಚ್ಚಿನೊಳಗಿಕ್ಕುವೆ !

***

ತನ್ನ ವಿಚಾರಿಸಲೊಲ್ಲದು. ಇದಿರ ವಿಚಾರಿಸಹೋಹುದೀ ಮನವು !
ಏನು ಮಾಡುವೆನೀ ಮನವನು ?
ಎಂತು ಮಾಡುವೆನೀ ಮನವನು ?
ಕೂಡಲಸಂಗಮದೇವನ ಶರಣರ ನಚ್ಚದ ಮೆಚ್ಚದ ಬೆಂಧ
ಮನವನು ?

***

ಚೇಳಿಂಗೆ ಬಸುರಾಯಿತ್ತೆ ಕಡೆ :
ಬಾಳೆಗೆ ಫಲವಾಯಿತ್ತೇ ಕಡೆ ನೋಡಾ !
ರಣರಂಗದಲ್ಲಿ ಕಾದುವ ಓಲೆಕಾರಂಗೆ ಓಸರಿಸಿತೆ ಕಡೆ !
ಮಾಡುವ ಭಕ್ತಂಗೆ ಮನ ಹೀನವಾದಡೆ ಅದೇ ಕಡೆ
ಕೂಡಲಸಂಗಮದೇವಾ ?

***

ಲಿಂಗದಲ್ಲಿ ಕಠಿಣವುಂಟೆ ? ಜಂಗಮದಲ್ಲಿ ಕುಲವುಂಟೇ ?
ಪ್ರಸಾದದಲ್ಲಿ ಅನುರುಚಿಯುಂಟೆ ?
ಈ ತ್ರಿವಿಧದಲ್ಲಿ ಭಾವಭೇದವನಸುವೆನು ಕೂಡಲಸಂಗಮದೇವಾ.
ಧಾರೆವಟ್ಟಲೆನ್ನ ಭಕ್ತಿ !

***

ಲೌಕಿಕರ ಕಂಡು ಆಡುವೆ ಹಾಡುವೆ.
ತಾರ್ಕಿಕರ ಕಂಡು ಆಡುವೆ ಹಾಡುವೆ.
ಸಹಜಗುಣವೆನ್ನಅಲ್ಲಯ್ಯಾ ನಿಜಭಕ್ತಿಯೆನಗಿಲ್ಲ. ತಂದೇ.
ಏನೋ ಭಾವ ಎನಗುಳ್ಳರೆ. ಏಕೆ ನೀ ಕರುಣಿಸೆ.
ಕೂಡಲಸಂಗಮದೇವಾ.

ಮನವೇ ಸರ್ಪ, ತನುವೇ ಹೇಳಿಗೆ :
ಹಾವಿನೊಡತಣ ಹುದುವಾಳಿಗೆ !
ಇನ್ನಾವಾಗ ಕೊಂದಹುದೆಂದರಿಯೆ,
ಇನ್ನಾವಾಗ ತಿಂದಹುದೆಂದರಿಯೆ !
ನಿಚ್ಚಕ್ಕೆ ನಿಮ್ಮ ಪೂಜಿಸಬಲ್ಲಡೆ
ಅದೇ ಗಾರುಡ ಕೂಡಲಸಂಗಮದೇವಾ.

***

ತಂದೆ ನೀನು ತಾಯಿ ನೀನು :
ಬಂಧು ನೀನು, ಬಳಗ ನೀನು :
ನೀನಲ್ಲದೆ ಮತ್ತಾರೂ ಇಲ್ಲಯ್ಯಾ !
ಕೂಡಲಸಂಗಮದೇವಾ, ಹಾಲಲದ್ದು, ನೀರಲದ್ದು !

***

ತನುವ ಬೇಡಿದಡೀವೆ, ಮನವ ಬೇಡಿದಡೀವೆ,
ಧನವ ಬೇಡಿದಡೀವೆ :
ಬೇಡು, ಬೇಡೆಲೆ ಹಂದೇ !
ಕಣ್ಣ ಬೇಡಿದಡೀವೆ, ತಲೆಯ ಬೇಡಿದಡೀವೆ :
ಕೂಡಲಸಂಗಮದೇವಾ,
ನಿಮಗಿತ್ತು ಶುದ್ಧನಾಗಿಪ್ಪೆ ನಿಮ್ಮ ಪುರಾತನರ ಮನೆಯಲ್ಲಿ.

***

ಹಾಲ ತೊರೆಗೆ ಬೆಲ್ಲದ ಕೆಸರು,
ಸಕ್ಕರೆಯ ಮಳಲು, ತವರಾಜದ ನೊರೆತೆರೆಯಂತೆ
ಆದ್ಯರ ವಚನವಿರಲು ಬೇರೆ ಬಾವಿಯ ತೋಡಿ
ಉಪ್ಪು ನೀರನುಂಬುವನ ವಿಧಿಯಂತೆ
ಆಯಿತ್ತೆನ್ನ ಮತಿ, ಕೂಡಲಸಂಗಮದೇವಾ.



ಎಲ್ಲವ ಬೇಡಿದರೆಮ್ಮವರು : ಒಂದ ಬೇಡ ಮರೆದರಯ್ಯಾ :
ಮರ್ತ್ಯಲೋಕದ ಗಣಂಗಳು ಒಂದ ಬೇಡ ಮರೆದರು.
ಕೂಡಲಸಂಗಮದೇವಾ, ಎನ್ನ ಬೇಡ ಮರೆದರು !

***

ಒಲವಿಲ್ಲದ ಪೂಜೆ, ನೇಹವಿಲ್ಲದ ಮಾಟ !
ಆ ಪೂಜೆಯು, ಆ ಮಾಟವು ಚಿತ್ರದ ರೂಹು ಕಾಣಿರಣ್ಣಾ !
ಚಿತ್ರದ ಕಬ್ಬು ಕಾಣಿರಣ್ಣಾ !
ಅಪ್ಪಿದರೆ ಸುಖವಿಲ್ಲ, ಮೆಲಿದರೆ ರುಚಿಯಿಲ್ಲ,
ಕೂಡಲಸಂಗಮದೇವಾ, ನಿಜವಿಲ್ಲದವನ ಭಕ್ತಿ

***

ಏನನೋದಿ, ಏನಕೇಳಿ ಏನ ಮಾಡಿಯೂ ಫಲವೇನು
ನಿಮ್ಮವರೊಲಿಯದನ್ನಕ್ಕ ಶಿವ ಶಿವ ಮಹಾದೇವ,
ಬಾಳಿಲ್ಲದವಳ ಓಲೆಯಂತಾಯಿತ್ತೆನಗೆ,
ಕೂಡಲಸಂಗಮದೇವಾ.

***

ಅಚ್ಚ ಶರಣರು ನಿಮ್ಮ ನಿಚ್ಚ ನಿಚ್ಚ ನೆನೆವರು;
ಬಚ್ಚಬರಿಯ ಮಾತನಾಡುವನು !
ಒಪ್ಪಚ್ಚ ಅರೆಭಕ್ತಿ ನೆನೆಯಲೀಯದು
ನಿಮ್ಮ ಮೆಚ್ಚರು ನಿಮ್ಮ ಶರಣರು ಎನ್ನ ಕೂಡಲಸಂಗಮದೇವಾ.

***

ಕಾಂಚನವೆಂಬ ನಾಯ ನಚ್ಚಿ ನಿಮ್ಮ ನಾನು ಮರೆದೆನಯ್ಯಾ,
ಕಾಂಚನಕ್ಕೆ ವೇಳೆಯಿಲ್ಲದೆ ಅಂಗಕ್ಕೆ ವೇಳೆಯಿಲ್ಲ !
ಹಡಿಕೆಗೆ ಮೆಚ್ಚಿದ ಸೊಣಗ ಅಮೃತದ ಸವಿಯ ಬಲ್ಲುದೆ,
ಕೂಡಲಸಂಗಮದೇವಾ ?

ಒಡಲಿಲ್ಲದಾತ ಜಂಗಮ, ಪ್ರಾಣವಿಲ್ಲದಾತ ಭಕ್ತನಯ್ಯಾ
ಆಚಾರವೇ ಜಂಗಮ, ವಿಚಾರವೇ ಭಕ್ತನಯ್ಯಾ
ಆಚಾರವಿಚಾರವೆಂಬುದು ಸ್ವಾನುಭಾವವು ನೋಡಾ
ಕೂಡಲಸಂಗಮದೇವಾ.

***

ನೋಡಿ ನೋಡಿ ಮಾಡುವ ನೇಮ ಸಲ್ಲವು ! ಸಲ್ಲವು !
ತನುವುದ್ದೇಶ, ಮನವುದ್ದೇಶವಾಗಿ ಮಾಡುವ ನೇಮ
ಸಲ್ಲವು ! ಸಲ್ಲವು !
ಕೂಡಲಸಂಗಮದೇವಯ್ಯಾ,
ಇವು ನಿಮ್ಮ ನಿಜದೊಳಗೆ ನಿಲ್ಲವು ! ನಿಲ್ಲವು !

***

ಹಸಿದು ಬಂದ ಗಂಡಂಗೆ ಉಣಲಿಕ್ಕದೆ
ಬಡವಾದನೆಂದು ಮರುಗುವ ಸತಿಯ ಸ್ನೇಹದಂತೆ,
ಬಂದುದನರಿಯಳು
ಇದ್ದುದ ಸವೆಸಳು
ದುಃಖವಿಲ್ಲದ ಅಕ್ಕೆ - ಹರಗಣಿಗನ ತೆರನಂತೆ
ಕೂಡಲ ಸಂಗಮದೇವ ॥

***

ದಾಸಿದೇವ ತನ್ನ ವಸ್ತ್ರವನ್ನಿತ್ತು ತವನಿಧಿಯ ಪ್ರಸಾದವ ಪಡೆದ.
ಸಿರಿಯಾಳ ತನ್ನ ಮಗನನಿತ್ತು ಪ್ರಾಣ ಪ್ರಸಾದವ ಪಡೆದ
ಇವರೆಲ್ಲರೂ ತಮತಮಗೆ ಮಾಡಿ ಹಡೆದರು
ಸಮ್ಯಕ್ ಪದವಿಯನು.
ನಾನೇನನ್ನೂ ಅರಿಯದ ಭಕ್ತಿಯ
ಬಡವಂಗೆ ಕುರಣಿಸು ಕೂಡಲಸಂಗಮದೇವಾ.



ಬಂದುದ ಕೈ ಕೊಳ್ಳಬಲ್ಲಡೆ ನೇಮ :
ಇದ್ದುದ ವಂಚನೆ ಮಾಡದಿದ್ದಡೆ, ಅದು ನೇಮ :
ನಡೆದು ತಪ್ಪದಿದ್ದರೆ ನೇಮ :
ನುಡಿದು ಹುಸಿಯದಿದ್ದಡೆ ನೇಮ :
ನಮ್ಮ ಕೂಡಲಸಂಗನ ಶರಣರು ಬಂದಡೆ
ಒಡೆಯರಿಗೊಡವೆಯನೊಪ್ಪಿಸುವುದೇ ನೇಮ.

***

ಮಾಡುವಾತ ನಾನಲ್ಲಯ್ಯಾ : ನೀಡುವಾತ ನಾನಲ್ಲಯ್ಯಾ.
ಬೇಡುವಾತ ನಾನಲ್ಲಯ್ಯಾ, ನಿಮ್ಮ ಕಾರಣ್ಯವಲ್ಲದೆ.
ಎಲೆ ದೇವಾ, ಮನೆಯ ತೊತ್ತಲಸಿದಡೆ ಒಡತಿ ಮಾಡಿಕೊಂಬಂತೆ,
ನಿನಗೆ ನೀ ಮಾಡಿಕೋ ಕೂಡಲಸಂಗಮದೇವಾ.

***

ಎನ್ನ ಪಾಮ ಕ್ಷೇಮ ನಿಮ್ಮದಯ್ಯಾ :
ಎನ್ನ ಹಾನಿ ವೃದ್ಧಿ ನಿಮ್ಮದಯ್ಯಾ :
ಎನ್ನ ಮಾನಾಪಮಾನ ನಿಮ್ಮದಯ್ಯಾ,
ಬಳ್ಳಿಗೆ ಕಾಯಿ ದಿಮ್ಮಿತ್ತೆ ಕೂಡಲಸಂಗಮದೇವಾ ?

***

ಮಾವಿನ ಕಾಯಿಯೊಳಗೊಂದು ಎಕ್ಕೆಯ ಕಾಯಿ ನಾನಯ್ಯಾ.
ಆನು ಭಕ್ತನೆಂತೆಂಬೆ, ನಿಮ್ಮ ಶರಣರ ಮುಂದೆ ನಾಚಿಕೆಯಿಲ್ಲದೆ?
ಕೂಡಲಸಂಗನ ಶರಣರ ಮುಂದೆ ನಾನೆಂತು ಭಕ್ತನೆಪ್ಪನಯ್ಯಾ ?

***

ಆನು, ನಿಮ್ಮ ಶರಣರಿಗೆ ಮುಂಡೆಯ ಬೋಳಿಸಿಕೊಂಡು
ಗಂಡು ತೊತ್ತಾದೆನಯ್ಯಾ:
ಕೂಡಲಸಂಗಮದೇವಾ ನಿಮ್ಮ ಶರಣರಿಗೆ.

ಮಡಕೆಯ ಮಾಡುವಡೆ ಮಣ್ಣೇ ಮೊದಲು ;
ತೊಡುಗೆಯ ಮಾಡುವಡೆ ಹೊನ್ನೇ ಮೊದಲು ;
ಶಿವಪಥವನರಿವಡೆ ಗುರುಪಥವೆ ಮೊದಲು ;
ಕೂಡಲಸಂಗಮದೇವರನರಿವರೆ ಶರಣರ ಸಂಗವೆ ಮೊದಲು.

***

ಕೆರೆಹಳ್ಳ ಬಾವಿಗಳು ಮೈದೆಗೆದಡೆ
ಗುಳ್ಳೆ ಗೊರಚೆ ಚಿಪ್ಪುಗಳು ಕಾಣಬಹುದು.
ವಾರಿಧಿ ಮೈದೆಗೆದಡೆ ರತ್ನಂಗಳು ಕಾಣಬಹುದು.
ಕೂಡಲಸಂಗನ ಶರಣರು ಮನದೆರೆದು ಮಾತನಾಡಿದಡೆ
ಲಿಂಗವೆ ಕಾಣಬಹುದು !

***

ಬ್ರಹ್ಮ ಪದವಿಯನೊಲ್ಲೆ,
ವಿಷ್ಣು ಪದವಿಯನೊಲ್ಲೆ,
ರುದ್ರಪದವಿಯನೊಲ್ಲೆ,
ಮತ್ತಾವ ಪದವಿಯನೊಲ್ಲೆಯಯ್ಯಾ !
ಕೂಡಲ ಸಂಗಮದೇವಾ, ನಿಮ್ಮ ಸದ್ಭಕ್ತರ ಪಾದವನರಿದಿಪ್ಪ
ಮಹಾಪದವಿಯನೆ ಕರುಣಿಸಯ್ಯಾ.

***

ಹೊಲಬುಗೆಟ್ಟ ಶಿಶು ತಾಯ ಬಯಸುವಂತೆ,
ಬಳಿದಪ್ಪಿದ ಪಶು ತನ್ನ ಹಿಂಡನರಸುವಂತೆ ಬಯಸುತ್ತಿರ್ದೆನಯ್ಯಾ,
ನಿಮ್ಮ ಶರಣರ ಬರುವನು ಬಯಸುತ್ತಿರ್ದೆನಯ್ಯಾ
ನಿಮ್ಮ ಭಕ್ತರ ಬರುವನು :
ದಿನಕರನುದಯಕ್ಕೆ ಮಕಳವಿಕಸಿತವಾದಂತೆ
ಎನಗೆ ನಿಮ್ಮ ಶರಣರ ಬರುವು, ಕೂಡಲಸಂಗಮದೇವಾ.



ಹಾವಿನ ಡೊಂಕ ಹುತ್ತಕ್ಕೆ ಸಸಿನ.
ನದಿಯ ಡೊಂಕು ಸಮುದ್ರಕ್ಕೆ ಸಸಿನ.
ನಮ್ಮ ಕೂಡಲಸಂಗನ ಶರಣರ ಡೊಂಕ ಲಿಂಗಕ್ಕೆ ಸಸಿನ !

***

ಹಾಲನೇಮ, ಹಾಲ ಕೆನೆಯ ನೇಮ :
ಕೆನೆ ತಪ್ಪಿದ ಬಳಿಕ ಕಿಚ್ಚಡಿಯ ನೇಮ :
ಬೆಣ್ಣೆಯ ನೇಮ, ಬೆಲ್ಲದ ನೇಮ ।
ಅಂಬಲಿಯ ನೇಮದವರನಾರನೂ ಕಾಣೆ.
ಕೂಡಲಸಂಗನ ಶರಣರಲ್ಲಿ
ಅಂಬಲಿಯ ನೇಮದಾತ ಮಾದಾರ ಚೆನ್ನಯ್ಯ.

***

ಸೂರ್ಯನುದಯ ತಾವರೆಗೆ ಜೀವಾಳ,
ಚಂದ್ರನುದಯ ನೆಯ್ದಿಲೆಗೆ ಜೀವಾಳ,
ಕೂಪರಠಾವಿನಲ್ಲಿ ಕೂಟ ಜೀವಾಳ,
ಒಲಿದ ಠಾವಿನಲ್ಲಿ ನೋಟ ಜೀವಾಳವಯ್ಯಾ,
ಕೂಡಲಸಂಗನ ಶರಣರ ಬರವೆನಗೆ ಪ್ರಾಣ ಜೀವಾಳವಯ್ಯಾ.

***

ಜಜ್ಜನೆ ಜರಿದೆದು ಜಜ್ಜನೆ ಜರಿದೆ, ನೋಡಯ್ಯಾ !
ಬಿಬ್ಬನೆ ಬಿರಿದನು ಬಿಬ್ಬನೆ ಬಿರಿದೆ, ನೋಡಯ್ಯಾ !
ನಾನೊಬ್ಬನೇ ಉಳಿದೆನು.
ನಾನೊಬ್ಬನೆ ಉಳಿದೆ ಕೂಡಲಸಂಗಮದೇವಾ,
ನಿಮ್ಮ ಶರಣರನಗಲಿದ ಕಾರಣ !

ಹಾವಿನ ಹೆಡೆಗಳ ಕೊಂಡು ಕೆನ್ನೆಯ ತುರಿಸುವಂತೆ,
ಉರಿವ ಕೊಳ್ಳಿಯ ಕೊಂಡು ಮಂಡೆಯ ಸಿಕ್ಕ ಬಿಡಿಸುವಂತೆ,
ಹುಲಿಯ ಮೀಸೆಯ ಹಿಡಿದುಕೊಂಡು ಒಲಿದುಯ್ಯಾಲೆ
ಯಾಡುವಂತೆ,
ಕೂಡಲಸಂಗನ ಶರಣರೊಡನೆ ಮರೆದು ಸರಸವಾಡಿದಡೆ
ಸುಣ್ಣದ ಕಲ್ಲ ಮಡಿಲಲ್ಲಿ ಕಟ್ಟಿಕೊಂಡು ಮಡುವ ಬಿದ್ದಂತೆ.

***

ನೀರಿಗೆ ನೆಯ್ದಿಲೆ ಶೃಂಗಾರ ;
ಸಮುದ್ರಕ್ಕೆ ತೆರೆಯೇ ಶೃಂಗಾರ ;
ನಾರಿಗೆ ಗುಣವೇ ಶೃಂಗಾರ ;
ಗಗನಕ್ಕೆ ಚಂದ್ರಮನೇ ಶೃಂಗಾರ ;
ನಮ್ಮ ಕೂಡಲಸಂಗನ ಶರಣರಿಗೆ
ನೊಸಲ ವಿಭೂತಿಯೇ ಶೃಂಗಾರ.

***

ಸಾಸಿವೆಯ ಮೇಲೆ ಸಾಗರವರಿದಂತಾಯಿತ್ತಯ್ಯಾ ;
ಆನಂದದಿಂದ ನಲಿನಲಿದಾಡುವೆ,
ಆನಂದದಿಂದ ಕುಣಿಕುಣಿದಾಡುವೆ !
ಕೂಡಲಸಂಗನ ಶರಣರು ಬಂದಡೆ,
ಉಬ್ಬಿ ಕೊಬ್ಬಿ ಹರುಷದಲೋಲಾಡುವೆ !

***

ಅಡವಿಯಲ್ಲೊಬ್ಬ ಕಡು ನೀರಡಿಸಿ,
ಎಡೆಯಲ್ಲಿ ನೀರ ಕಂಡಂತಾಯಿತ್ತಯ್ಯಾ !
ಕುರುಡ ಕಣ್ಣ ಹಡೆದಂತೆ, ಬಡವ ನಿಧಾನವ ಕಂಡಂತಾಯಿತ್ತಯ್ಯಾ
ನಮ್ಮ ಕೂಡಲ ಸಂಗನ ಶರಣರ ಬರವೆನ್ನ ಪ್ರಾಣ ಕಂಡಯ್ಯಾ !



ಹಾಲ ತೊರೆಗೆ ಬೆಲ್ಲದ ಕೆಸರು, ಸಕ್ಕರೆಯ ಮಳಲು,
ತವರಾಜದ ನೊರೆತೊರೆಯಂತೆ ಆದ್ಯರ ವಚನವಿರಲು,
ಬೇರೆ ಬಾವಿಯ ತೋಡಿ,
ಉಪ್ಪು ನೀರನುಂಬುವನ ವಿಧಿಯಂತೆ
ಆಯಿತ್ತೆನ್ನ ಮತಿ ಕೂಡಲಸಂಗಮದೇವಾ.

***

ಎತ್ತೆತ್ತ ನೋಡಿದತ್ತತ್ತ ನೀನೇ ದೇವಾ.
ಸಕಲ ವಿಸ್ತಾರದ ರೂಹು ನೀನೇ ದೇವಾ.
ವಿಶ್ವತೋಚಕ್ಷು ನೀನೇ ದೇವಾ.
ವಿಶ್ವತೋಮುಖ ನೀನೇ ದೇವಾ.
ವಿಶ್ವತೋಬಾಹು ನೀನೇ ದೇವಾ.
ವಿಶ್ವತೋಪಾದ ನೀನೇ ದೇವಾ ಕೂಡಲಸಂಗಮದೇವಾ !

***

ದೇವನೊಬ್ಬ ನಾಮಹಲವು ;
ಪರಮಪತಿವ್ರತೆಗೆ ಗಂಡನೊಬ್ಬ ;
ಮತ್ತೊಂದಕ್ಕೆರಗಿದಡೆ ಕಿವಿಮೂಗ ಕೊಯ್ವನು !
ಹಲವು ದೈವದ ಎಂಜಲ ತಿಂಬವರನೇನೆಂಬೆ,
ಕೂಡಲಸಂಗಮದೇವಾ ?

***

ಸಾಸವೆಯ ಮೇಲೆ ಸಾಗರವರಿದಂತಾಯಿತ್ತಯ್ಯಾ
ಆನಂದದಿಂದ ನಲಿ ನಲಿದಾಡುವೆ,
ಆನಂದದಿಂದ ಕುಣಿ ಕುಣಿದಾಡುವೆ ಕೂಡಲಸಂಗ ಶರಣರು ಬಂದರೆ,
ಉಬ್ಬಿ ಕೊಬ್ಬಿ ಹರುಷದ ಲೋಲಾಡುವೆ.

ಜಗದಗಲ, ಮುಗಿಲಗಲ, ಮಿಗೆಯಗಲ ನಿಮ್ಮಗಲ :
ಪಾತಾಳದಿಂದತ್ತತ್ತ, ನಿಮ್ಮ ಶ್ರೀಚರಣ
ಬ್ರಹಾಂಡದಿಂದತ್ತತ್ತ ನಿಮ್ಮ ಶ್ರೀಮಕುಟ
ಅಗಮ್ಯ ಅಗೋಚರ ಅಪ್ರತಿಮ ಲಿಂಗವೆ, ಕೂಡಲಸಂಗಯ್ಯ
ಎನ್ನ ಕರಸ್ಥಳಕ್ಕೆ ಬಂದು ಚುಲುಕಾದಿರಯ್ಯಾ !

***

ಚಕೋರಂಗೆ ಚಂದ್ರಮನ ಬೆಳಗಿನ ಚಿಂತೆ.
ಅಂಬುಜಕೆ ಭಾನುವಿನುದಯದ ಚಿಂತೆ.
ಭ್ರಮರಂಗೆ ಪರಿಮಳದ ಬಂಡುಂಬ ಚಿಂತೆ.
ಎನಗೆ ನಮ್ಮ ಕೂಡಲಸಂಗಮದೇವರ ನೆನೆವುದೆ ಚಿಂತೆ.

***

ಮನೆಯ ಗಂಡನ ಮನೆವಾರ್ತೆಯನೇನ ಹೇಳುವೆನವ್ವಾ ?
ಅಂಗವಿದ್ಯೆಯನೊಲ್ಲ :
ಕಣ್ಣೊಳಗಣ ಕಸವ ಕಳೆದಲ್ಲದೆ ನೋಡಲೀಯ :
ಕೈಯ ತೊಳೆದಲ್ಲದೆ ಮುಟ್ಟಲೀಯ :
ಕಾಲ ತೊಳೆದಲ್ಲದೆ ಹೊದ್ದಲೀಯ :
ಇಂತೀ ಸರ್ವಾಂಗ ತಲೆದೊಳೆದ ಕಾರಣ
ಕೂಡಲಸಂಗಮದೇವನೆನ್ನ ಕೂಡಿಕೊಂಡನವ್ವಾ !

***

ಮಸಿಯನೇಸು ಕಾಲ ಬೆಳಗಿದರೆ,
ಬಿಳಿದಾಗ ಬಲ್ಲುದೆ ?
ಕರ್ಮಸ್ಥಿತಿ ಬೆನ್ನಬಿಡದು,
ಅನಂತಕೋಟಿ ಸನ್ಮಾನವ ಮಾಡಿದರೇನು ?
ನಿಮಿಷದುದಾಸೀನ ಕೆಡಿಸಿತ್ತು !
ನಿಮ್ಮ ನಂಬಿಯೂ ನಬಂಬ ಡಂಬಕ ನಾನಯ್ಯಾ
ಕೂಡಲಸಂಮದೇವಾ.



ಒಲ್ಲೆನೆಂಬುದು ವೈರಾಗ್ಯ
ಒಲಿವೆನೆಂಬುದು ಕಾಯಗುಣ
ಆವ ಪದಾರ್ಥವಾದಡೇನು-
ನಾನಿರ್ದೆಡೆಗೆ ಬಂದುದ
ಲಿಂಗಾರ್ಪಿತವ ಮಾಡಿ ಭೋಗಿಸುವುದೇ ಆಚಾರ
ಕೂಡಲ ಸಂಗಮ ದೇವರನೊಲಿಸ ಬಂದ
ಪ್ರಸಾದ ಕಾಯವ ಕೆಡಿಸಲಾಗದು ॥

***

ಜಾಗ್ರ ಸ್ವಪ್ನ ಸುಷುಪ್ತಿಯಲ್ಲಿ ಮತ್ತೊಂದ ನೆನೆದಡೆ
ತಲೆದಂಡ, ತಲೆದಂಡ !
ಹುಸಿಯಾದಡೆ, ದೇವ, ತಲೆದಂಡ ತಲೆದಂಡ !
ಕೂಡಲಸಂಗಮದೇವಾ,
ನೀನಲ್ಲದೆ ಅನ್ಯವ ನೆನೆದಡೆ ತಲೆದಂಡ, ತಲೆದಂಡ !

***

ಎಲೆ ಎಲೆ ಮಾನವಾ ಅಳಿಯಾಸೆ ಬೇಡವೋ.
ಕಾಳ ಬೆಳದಿಂಗಳ ಸಿರಿ ಸ್ಥಿರವಲ್ಲ !
ಕೇಡಿಲ್ಲದ ಪದವಿ ಕೂಡಲಸಂಗಮದೇವನ ಮರೆಯದೆ ಪೂಜಿಸೋ.

***

ಅಷ್ಟವಿಧಾರ್ಚನೆ ಷೋಡಶೋಪಚಾರವ ಮಾಡುವ ಹಮ್ಮಿನಲ್ಲಿ
ಬೆಂದೆನಯ್ಯಾ, ಲಿಂಗವೆಂದರಿಯೆ, ಜಂಗಮವೆಂದರಿಯೆ,
ಪ್ರಸಾದವೆಂದರಿಯೆ ! ಆನು ಬೆಂದೆನಯ್ಯಾ ಕೂಡಲಸಂಗಮದೇವಾ,
ಆನು ಮಾಡುವುದೆಲ್ಲಾ ಉಪಚಾರವಯ್ಯಾ !

ಮರಮರ ಮಥನದಿಂದ ಅಗ್ನಿ ಹುಟ್ಟಿ
ಆ ಮರನೆಲ್ಲವ ಸುಡದಿಪ್ಪುದೇ ?
ಮಹಾನುಭಾವರ ಸಂಗದಿಂದ
ಜ್ಞಾನಾಗ್ನಿ ಹುಟ್ಟಿ
ಎನ್ನ ತನುಗುಣವೆಲ್ಲವ ಸುಡುದಿಪ್ಪುದೇ ? ಇದು ಕಾರಣ
ಮಹಾನುಭಾವರ ತೋರಿಸು ಕೂಡಲ ಸಂಗಮದೇವ ॥

***

ಆಡಿ ಕಾಲು ದಣಿಯವು, ನೋಡಿ ಕಣ್ಣು ದಣಿಯವು,
ಹಾಡಿ ನಾಲಗೆ ದಣಿಯದು. ಇನ್ನೇವೆನಿನ್ನೇವೆ ?
ನಿಮ್ಮ ಕೈಯಾರೆ ಪೂಜಿಸಿ
ಮನ ದಣಿಯಲೊಲ್ಲದಿನ್ನೇವೆನಿನ್ನೇವೆ ?
ಕೂಡಲಸಂಗಮದೇವ ಕೇಳಯ್ಯ,
ನಿಮ್ಮುದರವ ಬಗಿದಾನು ಹೊಗುವ ಭರವೆನಗೆ !

***

ವಚನದಲ್ಲಿ ನಾಮಾಮೃತ ತುಂಬಿ,
ನಯನದಲ್ಲಿ ಮೂರುತಿ ತುಂಬಿ,
ಮನದಲ್ಲಿ ನಿಮ್ಮ ನೆನಹು ತುಂಬಿ,
ಕಿವಿಯಲ್ಲಿ ಕೀರುತಿ ತುಂಬಿ,
ಕೂಡಲಸಂಗಮದೇವಾ,
ನಿಮ್ಮ ಚರಣಕಮಲದಲಾನು ತುಂಬಿ !

***

ಉತ್ತಮ, ಮಧ್ಯಮ, ಕನಿಷ್ಠವೆಂದು ಬಂದ ಜಂಗಮವೆಂದೆನಾದರೆ,
ನೊಂದೆನಯ್ಯಾ, ಬೆಂದೆನಯ್ಯಾ, ಎನ್ನ ಕಿಚ್ಚು ಎನ್ನ ಸುಟ್ಟಿತ್ತು !
ಸುಖ ಜಂಗಮ, ಸಾಮಾನ್ಯ ಜಂಗಮವೆಂದುಂಟೆ
ಕೂಡಲಸಂಗಮದೇವಾ ?



ನೀನೊಲಿದಡೆ ಕೊರಡು ಕೊನರುವುದಯ್ಯಾ.
ನೀನೊಲಿದಡೆ ಬರಡು ಹಯನಹುದಯ್ಯಾ.
ನೀನೊಲಿದಡೆ ವಿಷವೆ ಅಮೃತವಹುದಯ್ಯಾ
ನೀನೊಲಿದಡೆ ಸಕಲ ಪಡಿಪದಾರ್ಥ
ಇದಿರಲಿರ್ಪ್ಪುವು ಕೂಡಲಸಂಗಮದೇವಾ.

***

ಇವನಾರವ ಇವನಾರವ ಇವನಾರವನೆಂದೆನಿಸದಿರಯ್ಯಾ.
ಇವ ನಮ್ಮವ ಇವ ನಮ್ಮವ ಇವನಮ್ಮವನೆಂದೆನಿಸಯ್ಯಾ.
ಕೂಡಲಸಂಗಮದೇವಾ. ನಿಮ್ಮ ಮನೆಯ ಮಗನೆನಿಸಯ್ಯಾ.

***

ಎಡದ ಕೈಯಲಿ ನಿಗಳವನಿಕ್ಕಿ
ಬಲಕ ಕೈಯ ಕಡಿದುಕೊಂಡರೆ
ಬಲದ ಕೈಯ ಕಡಿದುಕೊಂಡರೆ ನೋಯದಿಪ್ಪುದೆ?
ಪ್ರಾಣವೊಂದಾಗಿ ದೇಹ ಬೇರಿಲ್ಲ;
ಲಿಂಗವ ಪೂಜಿಸಿ ಜಂಗಮವನುದಾಸೀನವ
ಮಾಡಿದರೆ ನೊಂದೆನಯ್ಯಾ ನಾನು ಕೂಡಲಸಂಗಮದೇವಾ !

***

ಉಟ್ಟು, ತೊಟ್ಟು ಪೂಜ್ಯನಾಗಿ ಬಂದ ಜಂಗಮ ವಿಶೇಷವೆಂದು,
ಕಂತೆಬೊಂತೆಯ ಜಂಗಮ ಬಂದರೆ,
ಹೀನವೆಂದು ಕಂಡೆನಾದರೆ
ಪಂಚ ಮಹಾಪಾತ ! ಇದು ಕಾರಣ,
ಅನ್ನ ವಸ್ತ್ರ ಧನಮಾಟದಲ್ಲಿ ಎರಡಾಗಿ ಕಂಡೆನಾದರೆ
ನರಕದಲ್ಲಿಕ್ಕುವ ಕೂಡಲಸಂಗಮದೇವಾ.

ಪಟ್ಟವ ಕಟ್ಟಿದ ಬಳಿಕ ಲಕ್ಷಣವನರಸುವರೆ ?
ಲಿಂಗದೇವನ ಪೂಜಿಸಿ ಕುಲವನರಸುವರೆ ಅಯ್ಯಾ -
ಕೂಡಲಸಂಗಮದೇವ " ಭಕ್ತಕಾಯ ಮಮಕಾಯಾ "
ವೆಂದನಾಗಿ ?

***

ನೆಲನೊಂದೆ ಹೊಲೆಗೇರಿ ಶಿವಾಲಯಕ್ಕೆ
ಜಲವೊಂದೆ ಶೌಚಾಚಮನಕ್ಕೆ.
ಕುಲವೊಂದೆ ತನ್ನ ತಾನರಿದವಂಗೆ.
ಫಲವೊಂದೆ ಷಡುದರುಷನ ಮುಕ್ತಿಗೆ.
ನಿಲವೊಂದೆ - ಕೂಡಲಸಂಗಮದೇವಾ, ನಿಮ್ಮನರಿದವಂಗೆ.

***

ಭಕ್ತಿಯೆಂಬ ಪೃಥ್ವಿಯ ಮೇಲೆ :
ಗುರುವೆಂಬ ಬೀಜವಂಕುರಿಸಿ,
ಲಿಂಗವೆಂಬ ಎಲೆಯಾಯಿತ್ತು,
ಲಿಂಗವೆಂಬ ಎಲೆಯ ಮೇಲೆ ವಿಚಾರವೆಂಬ ಹೂವಾಯಿತ್ತು,
ಆಚಾರವೆಂಬ ಕಾಯಾಯಿತ್ತು,
ನಿಷ್ಪತ್ತಿಯೆಂಬ ಹಣ್ಣಾಯಿತ್ತು,
ನಿಷ್ಪತ್ತಿಯೆಂಬ ಹಣ್ಣು ತೊಟ್ಟು ಬಿಟ್ಟು ಕಳಚಿ ಬೀಳುವಲ್ಲಿ
ಕೂಡಲಸಂಗಮದೇವ ತನಗೆ ಬೇಕೆಂದು ಎತ್ತಿಕೊಂಡ.

***

ಸ್ಥಾವರ ಭಕ್ತಂಗೆ ಸೀಮೆಯಲ್ಲದೆ
ಘನಲಿಂಗ ಜಂಗಮಕ್ಕೆ ಸೀಮೆಯಲ್ಲಿದು ?
ಅಂಬುಧಿಗೆ ಸೀಮೆಯಲ್ಲದೆ
ಹರಿವ ನದಿಗೆ ಸೀಮೆಯಲ್ಲಿಯದು ?
ಭಕ್ತಂಗೆ ಸೀಮೆಯಲ್ಲದೆ
ಜಂಗಮಕ್ಕೆ ಸೀಮೆಯುಂಟೆ ಕೂಡಲಸಂಗಮದೇವಾ ?



ಅಕಟಕಟಾ ! ಶಿವ ನಿನಗಿನಿತು ಕರುಣವಿಲ್ಲ
ಅಕಟಕಟಾ ! ಶಿವ ನಿನಗಿನಿತು ಕೃಪೆಯಿಲ್ಲ
ಏಕೆ ಹುಟ್ಟಿಸಿದೆ ಇಹಲೋಕ ದುಃಖಿಯ ?
ಏಕೆ ಹುಟ್ಟಿಸಿದೆ ಪರಲೋಕ ದೂರನ ?
ಕೂಡಲಸಂಗಮದೇವಾ, ಕೇಳಯ್ಯಾ
ಎನಗಾಗಿ ಮತ್ತೊಂದು ತರುಮರನಿಲ್ಲವೆ ?

***

ಮತಿಮಂದನಾಗಿ ಗತಿಯಕಾಣದೆ ಇರ್ದೆನಯ್ಯಾ !
ಹುಟ್ಟುಗುರುಡನ ಕೈಯ್ಗೆ ಕೋಲು ಕೊಟ್ಟು ನಡೆಸುವಂತೆ
ನಡೆಸಯ್ಯಾ ಎನ್ನಾ,
ನಿಮ್ಮಚ್ಚ ಶರಣರ ಒಕ್ಕುದ ಮಿಕ್ಕುದ
ನಚ್ಚಿಸು ಮೆಚ್ಚಿಸು ಕೂಡಲಸಂಗಮದೇವಾ.

***

ತಾಳಮಾನ ಸಲಿಸವನರಿಯೆ.
ಓಜೆ ಬಜಾವಣೆಯ ಲೆಕ್ಕವನರಿಯೆ.
ಅಮೃತಗಣ ದೇವಗಣವನರಿಯೆ !
ಕೂಡಲಸಂಗಮದೇವಾ,
ನಿನಗೆ ಕೇಡಿಲ್ಲವಾಗಿ ಆನು ಒಲಿದಂತೆ ಹಾಡುವೆ !

***

ಮರಕ್ಕೆ ಬಾಯಿ ಬೇರೆಂದು ತಳಕ್ಕೆ ನೀರೆರೆದರೆ
ಮೇಲೆ ಪಲ್ಲವಿಸಿತ್ತು ನೋಡಾ !
ಲಿಂಗದ ಬಾಯಿ ಜಂಗಮವೆಂದು ಪಡಿಪದಾರ್ಥವ ನೀಡಿದರೆ
ಮುಂದೆ ಸಕಲ ಪದಾರ್ಥವನೀವನು !
ಆ ಜಂಗಮವ ಹರನೆಂದು ಕಂಡು, ನರನೆಂದು ಭಾವಿಸಿದರೆ
ನರಕ ತಪ್ಪದು ಕಾಣಾ ಕೂಡಲಸಂಗಮದೇವಾ.

ನಾನು ಭಕ್ತನಲ್ಲವಯ್ಯಾ .
ನಾನು ಯುಕ್ತನಲ್ಲವಯ್ಯಾ .
ನಾನು ಕಪಟವೇಷಡಂಭಕನಯ್ಯಾ
ಕೂಡಲಸಂಗಮದೇವಾ,
ಎನ್ನ ಭಕ್ತಿ, ಮಳಲೊಟ್ಟಿಲು ಎಂಬುದ ನೀವು ತೋರಿದಿರಾಗಿ
ಎನಗೆ ಅರಿಯ ಬಂದಿತ್ತಯ್ಯಾ , ಪ್ರಭುವೆ.

***

ತಾಮಸದೆ ಮುಸುಕಿ ಕಂಗಳ ಕೆಡಿಸಿತ್ತೆನ್ನ ಭಕ್ತಿ :
ಕಾಮವೆಂಬಗ್ನಿಗೆ ಮುರಿದಿಕ್ಕಿತ್ತೆನ್ನ ಭಕ್ತಿ :
ಉದರಕ್ಕೆ ಕುದಿಕುದಿದು ಮುಂದುಗೆಲಿಸಿತ್ತೆನ್ನ ಭಕ್ತಿ :
ಹೆಣಮೂಳನು ನಾನು ಕೂಡಲಸಂಗಮದೇವಾ !
ಕ್ಷಣ ಹದುಳವಿರದೆ ಬಾಯಿ ಬೊಣದೇ ಹೋಯಿತ್ತೆನ್ನ ಭಕ್ತಿ .

***

ಒಡೆದೋಡು ಎನ್ನ ಮನೆಯಲ್ಲಿಲ್ಲದಂತೆ ಮಾಡಯ್ಯಾ
ಕೊಡುದೇವ ಎನ್ನ ಕೈಯಲೊಂದು ಕಲಿಕೆಯನು
ಮೃಡದೇವಾ ಶರಣೆಂದು ಭಿಕ್ಷಕ್ಕೆ ಹೋದಡೆ
ಅಲ್ಲಿ - ನಡೆದೇವಾ ಎಂದೆನಿಸು ಕೂಡಲ ಸಂಗಮದೇವ ॥

***

ಜಂಗಮವಿಲ್ಲದ ಮಾಟ, ಕಂಗಳಿಲ್ಲದ ನೋಟ !
ಹಿಂಗಿತ್ತು ಶಿವಲೋಕ, ಇನ್ನೆಲ್ಲಿಯದಯ್ಯಾ ?
ಲಿಂಗಕ್ಕೆ ಮಾಡಿದ ಬೋನವ ಸಿಂಬುಕ ತನ್ನುವಂತೆ
ಸಮಯೋಚಿತ ವನರಿಯರೆ ಉದರವ ಹೊರವವವರ
ನರಕದಲ್ಲಿಕ್ಕದೆ ಮಾಣ್ಬನೆ ಕೂಡಲಸಂಗಮದೇವಾ.



ತನು ನಿಮ್ಮ ದೆಂಬೆ, ಮನ ನಿಮ್ಮ ದೆಂಬೆ, ಧನ ನಿಮ್ಮ ದೆಂಬೆ
ಮತ್ತೆಯೂ ವಂಚನೆ ಮಾಣದಯ್ಯಾ !
ಲಿಂಗ ಜಂಗಮವೆಂಬೆ, ಜಂಗಮ ಲಿಂಗವೆಂಬೆ,
ಮತ್ತೆಯೂ ವಂಚನೆ ಮಾಣದಯ್ಯಾ !
ಒಡಲೊಡವೆ ಹಡೆದರ್ಥ ನಿಮ್ಮದೆಂದರಿಯದೆ
ಕೆಮ್ಮನೆ ಕೆಟ್ಟೆ ಕೂಡಲಸಂಗಮದೇವಾ !

***

ಒಡೆಯರಿಗೆ ಒಡವೆಯನೊಪ್ಪಿಸಲಾರದೆ
ಮೊರೆಯಿಡುವ ಮಾನವ ನಾನೇನೆಂಬೆ ?
ನೆತ್ತಿಯಲ್ಲಿ ಅಲಗ ತಿರುಹುಂತಪ್ಪ ವೇದನೆಯಹುದೆನಗೆ !
ಕೊಯಿದ ಮೂಗಿಂಗೆ
ಕನ್ನಡಿಯ ತೋರುವಂತಪ್ಪ ವೇದನೆಯಹುದೆನಗೆ !
ಕೂಡಲಸಂಗಮದೇವ ಮಾಡಿ ನೋಡುವ ಹಗರಣವ
ನಾ ಮಾಡಿಹೆನೆಂದರೆ
ಮನಕ್ಕೆ ಮನ ನಾಚದೆ ಅಯ್ಯಾ ?

***

ಆಡೂದಳವಟ್ಟಿತ್ತು, ಹಾಡೂದಳವಟ್ಟಿತ್ತು,
ಅರ್ಚನೆಯಳವಟ್ಟಿತ್ತು, ಪೂಜನೆಯಳವಟ್ಟಿತ್ತು,
ನಿತ್ಯ ಲಿಂಗಾರ್ಚನೆ ಮುನ್ನವೆ ಅಳವಟ್ಟಿತ್ತು :
ಕೂಡಲಸಂಗನ ಶರಣರು ಬಂದರೆ
ಏನು ಬೆಸನೆಂಬುದು ಒಪ್ಪಚ್ಚಿಯಳವಡದು.

***

ಎಂಬತ್ತು ನಾಲ್ಕು ಮುಖದೊಳಗೊಂದೇ
ಮುಖವಾಗಿ ಕಾಡಿ ನೋಡೆನ್ನನು; ಬೇಡಿ ನೋಡೆನ್ನನು;
ಬೇಡದಿದ್ದರೆ, ಅಯ್ಯಾ ನಿಮಗೆ ಪ್ರಮಥರಾಣೆ !
ನೀವಾವ ಮುಖದಲು ಬಂದು ಬೇಡಿದಡೀವೆ ಕೂಡಲಸಂಗಮದೇವಾ.

ಗಿಳಿಯ ಹಂಚರವಿಕ್ಕಿ ಸೊಡರಿಂಗೆಣ್ಣೆಯನೆರೆದು, ಬತ್ತಿಯನಿಕ್ಕಿ
ಬರವ ಹಾರುತ್ತಿದೆನೆಲೆಗವ್ವಾ .
ತರಗೆಲೆ ಗಿರಿಕೆಂದಡೆ ಹೊರಗನಾಲಿಸುವೆ,
ಅಗಲುವನೆಂದೆನ್ನ ಮನ ಧಿಗಿಲೆಂದಿತ್ತೆಲೆಗವ್ವಾ,
ಕೂಡಲಸಂಗನ ಶರಣರು ಬಂದು
ಬಾಗಿಲ ಮುಂದೆ ನಿಂದು
'ಶಿವಾ' ಎಂದರೆ ಸಂತೋಷಬಟ್ಟೆನೆಲೆಗವ್ವಾ .

***

ಹಾಲೆಂಜಲು ಪೆಯ್ಯನ
ಉದಕವೆಂಜಲು ಮತ್ಸ್ಯದ
ಪುಷ್ಪವೆಂಜಲು ತುಂಬಿಯ
ಎಂತು ಪೂಜಿಸುವೆನಯ್ಯಾ,
ಶಿವ ಶಿವಾ ! ಎಂತು ಪೂಜಿಸುವೆ ?
ಈ ಎಂಜಲವನತಿಗಳೆವಡೆ ಎನ್ನಳವಲ್ಲ
ಬಂದುದ ಕೈಕೊ ಕೂಡಲಸಂಗಮದೇವಾ.

***

ನರಬಂಧ್ಯದೊಳಗೆನ್ನ ಹುಲುಗಿಳಿಯ ಮಾಡಿ ಸಲಹುತ್ತ
'ಶಿವ ಶಿವಾ' ಎಂದೋದಿಸಯ್ಯಾ.
ಭಕ್ತಿಯೆಂಬ ಪಂಜರದೊಳಗಿಕ್ಕಿ ಸಲಹು
ಕೂಡಲಸಂಗಮದೇವಾ.

***

ಹೊನ್ನಿನೊಳಗೊಂದೊರೆಯ,
ಸೀರೆ ಯೊಳಗೊಂದಳೆಯ, ಅನ್ನದೊಳಗೊಂದಗುಳ,
ಇಂದಿಂಗೆ ನಾಳಿಂಗ ಬೇಕೆಂದೆನಾದರೆ ನಿಮ್ಮಾಣೆ !
ನಿಮ್ಮ ಪುರಾತನರಾಣೆ ! ನಿಮ್ಮ ಶರಣರಿಗಲ್ಲದೆ
ಮತ್ತೊಂದನರಿಯೆ ಕೂಡಲಸಂಗಮದೇವಾ



ಆಪ್ಯಾಯನಕ್ಕೆ ನೀಡುವೆ, ಲಾಂಛನಕ್ಕೆ ಶರಣೆಂಬೆ:
ಲಾಂಛನಕ್ಕೆ ತಕ್ಕ ಆಚರಣೆಯಿಲ್ಲದಿದ್ದರೆ
ಕೂಡಲಸಂಗಮದೇವಾ,
ನೀ ಸಾಕ್ಷಿಯಾಗಿ 'ಛೀ' ಎಂಬೆ !

***

ಗೀತವ ಹಾಡಿದೊಡೇನು ?
ಶಾಸ್ತ್ರ ಪುರಾಣವ ಕೇಳಿದೊಡೇನು ?
ವೇದವೇದಾಂತವನೋದಿದೊಡೇನು ?
ಮನವೊಲಿದು ಲಿಂಗಜಂಗಮನ ಪೂಜಿಸಲರಿಯದವರು
ಎಲ್ಲರಲಿ ಅನುಭಾವಿಯಾದೊಡೇನು ?
ಭಕ್ತಿಯಿಲ್ಲದವರನೊಲ್ಲ ಕೂಡಲಸಂಗಮದೇವ.

***

ಭಕ್ತಿಸುಭಾಷೆಯ ನುಡಿವೆ
ನುಡಿದಂತೆ ನಡೆವೆ
ನಡೆಯೊಳಗೆ ನುಡಿಯ ಪೂರೈಸುವೆ
ಮೇಲೆ ತೂಗುವ ತ್ರಾಸು ಕಟ್ಟಳೆ ನಿಮ್ಮ ಕೈಯಲ್ಲಿ
ಒಂದು ಜವೆ ಕೊರತೆಯಾದರೆ ಎನ್ನನದ್ದಿ ನೀನೆದ್ದು ಹೋಗು
ಕೂಡಲ ಸಂಗಮದೇವ ॥

***

ಕಾಗೆಯೊಂದಗುಳ ಕಂಡರೆ ಕರೆಯದೆ ತನ್ನ ಬಳಗವನು ?
ಕೋಳಿಯೊಂದು ಗುಟುಕ ಕಂಡರೆ
ಕೂಗಿ ಕರೆಯದೆ ತನ್ನ ಕುಲವನ್ನು ?
ಶಿವಭಕ್ತನಾಗಿ ಭಕ್ತಿಪಕ್ಷವಿಲ್ಲದಿದ್ದರೆ
ಕಾಗೆ ಕೋಳಿಯಿಂದ ಕರಕಷ್ಟ ಕೂಡಲಸಂಗಮದೇವಾ.

ರೂಪಚಕ್ರ ನಯನದಿಂದ ನಡೆವುದು :
ಶಬ್ದಚಕ್ರ ಶ್ರೋತ್ರದಿಂ ನಡೆವುದು :
ರುಚಿಚಕ್ರ ಜಿಹ್ವೆಯಿಂದ ನಡೆವುದು :
ಸೌರಚಕ್ರ ಘ್ರಾಣದಿಂ ನಡೆವುದು :
ಸ್ಪರ್ಶಚಕ್ರ ತ್ವಕ್ಕಿನಿಂದ ನಡೆವುದು :
ಈ ಐದರಿಂದ ನಡೆಯುತ್ತ ಲೋಕಾದಿಲೋಕಗಳೆಲ್ಲವು
ಹೀಗೆಯೆ ಕೆಟ್ಟುಹೋದವು ಈ ಐದರ ಕಥನದಲ್ಲಿ.
ಈ ಸಂಸಾರವೆಂಬ ಬಿಧಿಯ ಕೈಯಲ್ಲಿ
ಹರಿಬ್ರಹ್ಮ ಸುರರು ಮೊದಲಾದವರೆಲ್ಲರೂ
ಕೆಟ್ಟುಹೋದರು ನೋಡಾ ಕೂಡಲಸಂಗಮದೇವಾ.

***

ಹಸಿವು ತೃಷೆ ನಿದ್ರೆ ವಿಷಯಂಗಳ ಮರೆದೆ : ನೀವು ಕಾರಣ.
ಕಾಮ. ಕ್ರೋಧ. ಲೋಭ. ಮೋಹ. ಮದಮತ್ಸರಂಗಳ ಮರೆದೆ :
ನೀವು ಕಾರಣ.
ಪಂಚೇಂದ್ರಿಯ ಸಪ್ತಧಾತು ಅಷ್ಟಮದಂಗಳ ಮರೆದೆ :
ನೀವುಕಾರಣ.
ಕೂಡಲಸಂಗಮದೇವಯ್ಯಾ.
ನಿಮ್ಮ ಶರಣರಿಗೆ ಆಪ್ಯಾಯನವಾದರೆ ಎನಗೆ ತೃಪ್ತಿಯಾಯಿತು.

***

ಎಲ್ಲರೂ ವೀರರು: ಎಲ್ಲರೂ ಧೀರರು:
ಎಲ್ಲರೂ ಮಹಿಮರು. ಎಲ್ಲರೂ ಪ್ರಮಥರು:
ಕಾಳಗದ ಮುಖದಲ್ಲಿ ಕಾಣಬಾರದು.
ಓಡುವ ಮುಖದಲ್ಲಿ ಕಾಣಬಹುದು !
ನಮ್ಮ ಕೂಡಲಸಂಗನ ಶರಣರು ಧೀರರು
ಉಳಿದವರೆಲ್ಲಾ ಅಧೀರರು.



ಎನಿತು ಕಾಲ ಕಲ್ಲು ನೀರೊಳಗಿರ್ದಡೇನು.
ನೆನೆದು ಮೃದುವಾಗಬಲ್ಲುದೇ ?
ಎನಿಸು ಕಾಲ ನಿಮ್ಮ ಪೂಜಿಸಿ ಏವೆನಯ್ಯಾ,
ಮನದಲ್ಲಿ ದೃಢವಿಲ್ಲದನ್ನಕ್ಕ ?
ನಿಧಾನವ ಕಾಯ್ದಿರ್ದ ಬೆಂತರನಂತೆ !-
ಅದರ ವಿಧಿನೆನಗಾಯಿತ್ತು ಕೂಡಲಸಂಗಮದೇವಾ !

***

ಧರಣಿಯ ಮೇಲೊಂದು ಹಿರಿದಪ್ಪ ಅಂಗಡಿಯನಿಕ್ಕಿ
ಹರದ ಕುಳ್ಳಿರ್ದ ನಮ್ಮ ಮಹದೇವಸೆಟ್ಟಿ
ಒಮ್ಮನವಾದರೆ ಒಡನೆ ನುಡಿವನು.
ಇಮ್ಮನವಾದರೆ ನುಡಿಯನು :
ಕಾಣೆಯ ಸೋಲ, ಅದ್ದಗಾಣಿಯ ಗೆಲ್ಲ !
ಜಾಣ ನೋಡವ್ವಾ, ನಮ್ಮ ಕೂಡಲಸಂಗಮದೇವಾ !

***

ಎಡದ ಪಾದದಲ್ಲೊದ್ದಡೆ ಬಲದ ಪಾದವ ಹಿಡಿವೆ :
ಬಲದ ಪಾದದಲ್ಲೊದ್ದಡೆ ಎಡದ ಪಾದವ ಹಿಡಿವೆ :
ತ್ರಾಹಿ. ತ್ರಾಹಿ : ತಪ್ಪೆನ್ನದು. ಕ್ಷಮೆ ನಿಮ್ಮದು :
ಕೂಡಲಸಂಗಮದೇವಾ, ನಿಮ್ಮ ಕರುಣದ ಕಂದ ನಾನು !

***

ಹರಿವ ಹಾವಿಂಗಂಜೆ ! ಉರಿವ ನಾಲಿಗೆಗಂಜೆ
ಸುರಗಿಯ ಮೊನೆಗಂಜೆ ! ಒಂದಕ್ಕಂಜುವೆ ಒಂದಕ್ಕಳುಕುವೆ:
ಪರಸ್ತ್ರೀ ಪರಧನವೆಂಬೀ ಜೂಜಿಗಂಜುವೆ !
ಮುನ್ನಂಜದ ರಾವಣನೆ ಬಿಧಿಯಾದ !
ಅಂಜುವೆನಯ್ಯಾ. ಕೂಡಲಸಂಗಮದೇವಾ.

ದೇವಲೋಕ ಮರ್ತ್ಯಲೋಕವೆಂಬುದು ಬೇರಿಲ್ಲ ಕಾಣಿರಣ್ಣ !
ಸತ್ಯವ ನುಡಿವುದೆ ದೇವಲೋಕ.
ಮಿಥ್ಯವ ನುಡಿವುದೆ ಮರ್ತ್ಯಲೋಕ !
ಆಚಾರವೇ ಸ್ವರ್ಗ, ಅನಾಚಾರವೇ ನರಕ-
ನೀವೇ ಪ್ರಮಾಣು ಕೂಡಲಸಂಗಮದೇವಾ.

***

ಎಲವೊ ಎಲವೋ, ಪಾಪಕರ್ಮದ ಮಡಿದವನೇ,
ಎಲವೋ ಎಲವೋ ಬ್ರಹ್ಮಹತ್ಯವ ಮಾಡಿದವನೇ,
ಒಮ್ಮೆ 'ಶರಣೆ'ನ್ನೆಲವೋ !
ಒಮ್ಮೆ 'ಶರಣೆ'ಂದಡೆ ಪಾಪಕರ್ಮ ಓಡುವುವು.
ಸರ್ವ ಪ್ರಾಯಶ್ಚಿತ್ತಕ್ಕೆ ಹೊನ್ನ ಪರ್ವತಂಗಳೈದವು.
ಒರ್ವಂಗೆ ಶರಣೆನ್ನು ನಮ್ಮ ಕೂಡಲಸಂಗಮದೇವಂಗೆ !

***

ಎಮ್ಮವರು ಬೆಸಗೊಂಡರೆ ಶುಭಲಗ್ನವೆನ್ನಿರಯ್ಯ !
ರಾಶಿ-ಕೂಟ, ಋಣ-ಸಂಬಂಧ ಉಂಟೆಂದು ಹೇಳಿರಯ್ಯ !
ಚಂದ್ರಬಲ-ತಾರಾಬಲ ಉಂಟೆಂದು ಹೇಳಿರಯ್ಯ !
ನಾಳಿನ ದಿನಕಿಂದಿನ ದಿನ ಲೇಸೆಂದು ಹೇಳಿರಯ್ಯ !
ಕೂಡಲ ಸಂಗಮದೇವರ ಪೂಜಿಸಿದ ಫಲ ನಿಮ್ಮದಯ್ಯ ॥

***

ಶ್ರೀ ವಿಭೂತಿಯ ಹೊಸದವರ,
ಶ್ರೀ ರುದ್ರಾಕ್ಷಿಯ ಧರಿಸದವರ
ನಿತ್ಯಲಿಂಗಾರ್ಚನೆಯ ಮಾಡದವರ,
ಜಂಗಮವೇ ಲಿಂಗವೆಂದರಿಯದವರ,
ಸದ್ಭಕ್ತರ, ಸಂಗದಲ್ಲಿರದವರ ಎನಗೊಮ್ಮೆ ತೋರದಿರು
ಕೂಡಲಸಂಗಮದೇವಾ ಸೆರಗೊಡ್ಡಿ ಬೇಡುವೆನು !



ಎಂಬತ್ತುನಾಲ್ಕು ಲಕ್ಷ ಮುಖದೊಳಗೊಂದೇ ಮುಖವಾಗಿ
ಕಾಡಿ ನೋಡೆನ್ನನು, ಬೇಡಿ ನೋಡೆನ್ನನು.
ಬೇಡದಿದ್ದರೆ, ಅಯ್ಯಾ, ನಿನಗೆ ಪ್ರಮಥರಾಣೆ !
ನೀನಾವ ಮುಖದಲು ಬಂದು ಬೇಡದಡೀವೆ
ಕೂಡಲಸಂಗಮದೇವಾ.

***

ಆರು ಮುನಿದು ನಮ್ಮನೇನು ಮಾಡುವರು ?
ಊರು ಮುನಿದು ನಮ್ಮನೆಂತು ಮಾಡುವುದು ?
ನಮ್ಮ ಕುನ್ನಿಗೆ ಕೂಸ ಕೊಡಬೇಡ :
ನಮ್ಮ ಸೊಣಗಂಗೆ ತಳಿಗೆಯನಿಕ್ಕಬೇಡ ?
ಆನೆಯ ಮೇಲೆ ಹೋಹನ ಶ್ವಾನ ಕಚ್ಚಬಲ್ಲುದೆ,
- ನಮಗೆ ನಮ್ಮ ಕೂಡಲ ಸಂಗಯ್ಯನುಳ್ಳನ್ನಕ್ಕ ?

***

ನಾಳೆ ಬಪ್ಪುದು ನಮಗಿಂದೇ ಬರಲಿ :
ಇಂದು ಬಪ್ಪುದು ನಮಗೀಗಲೆ ಬರಲಿ.
ಇದಕಾರಂಜುವರು ? ಇದಕಾರಳುಕುವರು ?
"ಜಾತಸ್ಯ ಮರಣಂ ಧ್ರುವಂ" ಎಂಬುದಾಗಿ,
ನಮ್ಮ ಕೂಡಲಸಂಗಮದೇವರು ಬರೆದ ಬರೆಹವ ತಪ್ಪಿಸುವರೆ
ಹರಿಬ್ರಹ್ಮಾದಿಗಳಿಗಳವಲ್ಲಾ

***

ಒಡೆದೋಡು ಎನ್ನ ಮನೆಯಲಿಲ್ಲದಂತೆ ಮಾಡಯ್ಯಾ;
ಕೊಡುದೇವ ಎನ್ನ ಕೈಯಲೊಂದು ಕಲಿಕೆಯ,
ಮೃಡದೇವಾ ಶರಣೆಂದು ಭಿಕ್ಷಕ್ಕೆ ಹೋದರೆ,
ಅಲ್ಲಿ ನಡೆದೇವಾ ಎಂದೆನಿಸು ಕೂಡಲಸಂಗಮದೇವಾ !

ಛಲಬೇಕು ಶರಣಂಗೆ ಪರಧನವನೊಲ್ಲೆನೆಂಬ
ಛಲಬೇಕು ಶರಣಂಗೆ ಪರಸತಿಯನೊಲ್ಲೆನೆಂಬ
ಛಲಬೇಕು ಶರಣಂಗೆ ಪರದೈವವನೊಲ್ಲೆನೆಂಬ
ಛಲಬೇಕು ಶರಣಂಗೆ ಲಿಂಗ-ಜಂಗಮಒಂದೆ ಎಂಬ
ಛಲಬೇಕು ಶರಣಂಗೆ ಪ್ರಸಾದ ದಿಟವೆಂಬ
ಛಲವಿಲ್ಲದವರ ಮೆಚ್ಚ ನಮ್ಮ ಕೂಡಲ ಸಂಗಮದೇವ ॥

***

ನ್ಯಾಯನಿಷ್ಠುರಿ, ದಾಕ್ಷಿಣ್ಯಪರನು ನಾನಲ್ಲ.
ಲೋಕವಿರೋಧಿ ಶರಣನಾರಿಗಂಜುವನಲ್ಲ -
ಕೂಡಲಸಂಗಮದೇವರ ರಾಜತೇಜದಲ್ಲಿಪ್ಪನಾಗಿ.

***

ಊರ ಮುಂದೆ ಹಾಲ ಹಳ್ಳ ಹರಿಯುತ್ತಿರಲು,
ಓರೆಯಾವಿನ ಬೆನ್ನಲ್ಲಿ ಹರಿಯಲದೇಕಯ್ಯಾ ?
ಲಜ್ಜೆಗೆಡಲೇಕೆ ? ನಾಣುಗೆಡಲೇಕೆ ?
ಕೂಡಲಸಂಗಮದೇವಯ್ಯನುಳ್ಳನ್ನಕ್ಕ
ಬಿಜ್ಜಳನ ಭಂಡಾರವೆನಗೇಕಯ್ಯಾ

***

ಪಾದೋದಕವ ಕೊಂಬೆ, ಪ್ರಸಾದವ ಕೊಂಬೆ,
ಅರ್ಥ ಪ್ರಾಣಾಭಿಮಾನ ನಿಮ್ಮದೆಂಬೆ !
ರಾತ್ರಿಯಲೊದತ್ತೆಯಕೊಂಬೆ ಪಾತಕ ಸೂಳೆಯಂತೆ
ಬಲಿಯ ಮಾತಿಂಗೊಲಿವನೆ ನಮ್ಮ ಕೂಡಲಸಂಗದೇವ ?

***

ತಂದೆ ನೀನು, ತಾಯಿ ನೀನು, ಬಂಧು ನೀನು, ಬಳಗ ನೀನು,
ನೀನಲ್ಲದೆ ಮತ್ತಾರೂ ಇಲ್ಲಯ್ಯಾ ?
ಕೂಡಲಸಂಗಮದೇವಾ, ಹಾಲಲದ್ದು, ನೀರಲದ್ದು !



ಒಡೆದೋಡು ಎನ್ನ ಮನೆಯಲ್ಲಿಲ್ಲದಂತೆ ಮಾಡಯ್ಯಾ.
ಕೊಡು, ದೇವಾ ಎನ್ನ ಕೈಯಲ್ಲೊಂದು ಕಿರಿಕೆಯ, 'ಮೃಢ, ದೇವಾ
ಶರಣೆ'ಂದು ಭಿಕ್ಷಕ್ಕೆ ಹೋದಡೆ, ಅಲ್ಲಿ,
'ನಡೆ, ದೇವಾ' ಎಂದೆನಿಸು, ಕೂಡಲಸಂಗಮದೇವಾ.

***

ಬಸವ ಬಾರೈ, ಮರ್ತ್ಯಲೋಕದೊಳಗೆ ಭಕ್ತರುಂಟೆ ಹೇಳಯ್ಯಾ
ಮತ್ತಾರೂ ಇಲ್ಲಯ್ಯಾ, ಮತ್ತಾರೂ ಇಲ್ಲಯ್ಯಾ,
ಮತ್ತಾರೂ ಇಲ್ಲಯ್ಯಾ, ನಾನೊಬ್ಬನೆ ಭಕ್ತನು.
ಮರ್ತ್ಯಲೋಕದೊಳಗಣ ಭಕ್ತರೆಲ್ಲರೂ
ಜಂಗಮಲಿಂಗ ನೀನೇ ಅಯ್ಯಾ ಕೂಡಲಸಂಗಮದೇವಾ !

***

ಏನನಾದಡೆಯೂ ಸಾಧಿಸಬಹುದು :
ಮತ್ತೇನನಾದಡೆಯೂ ಸಾಧಿಸಬಹುದಯ್ಯಾ.
ತಾನಾರಂಬುದ ಸಾಧಿಸಬಾರದು -
ಕೂಡಲಸಂಗಮದೇವರ ಕರುಣವುಳ್ಳವಂಗಲ್ಲದೆ !

***

ಅಂಗೈಯೊಳಗಣ ಲಿಂಗವ ನೋಡುತ್ತ,
ಕಂಗಳು ಕಡೆಗೋಡಿವರಿವುತ್ತ ಸುರಿಯುತ್ತ ಎಂದಿಪ್ಪೆನೋ,
ನೋಟವೇ ಪ್ರಾಣವಾಗಿ ಎಂದಿ ಕೂಟವೇ ಪ್ರಾಣವಾಗಿ
ಎಂದಿಪ್ಪೆನೋ ?
ಎನ್ನಂಗ ವಿಕಾರದ ಸಂಗವಳಿದು ಕೂಡಲಸಂಗಯ್ಯಾ,
ಲಿಂಗಯ್ಯಾ ಲಿಂಗ, ಲಿಂಗ, ಲಿಂಗವೆನ್ನುತ್ತ ?

ಹೋಯ್ದವರೆನ್ನ ಹೊರೆದವರೆಂಬೆನು
ಬೈದವರೆನ್ನ ಬಂಧುಗಳೆಂಬೆನು
ನಿಂದಿಸಿದವರೆನ್ನ ತಂದೆತಾಯಿಗಳೆಂಬೆನು
ಆಳಿಗೊಂಡವರೆನ್ನ ಆಳ್ದರೆಂಬೆನು
ಜರಿದವರೆನ್ನ ಜನ್ಮ ಬಂಧುಗಳೆಂಬೆನು
ಹೊಗಳಿದವರೆನ್ನ ಹೊನ್ನಶೂಳದಲಿಕ್ಕಿದವರು
ಕೂಡಲಸಂಗಮದೇವ ॥

***

ಆತ್ಮಸ್ತುತಿ ಪರನಿಂದೆಯ ಕೇಳಿಸದಿರಯ್ಯಾ, ನಿಮ್ಮ ಧರ್ಮ !
'ಆನು ಭಕ್ತನೆನ್ನಲ್ಲಿ ಲೇಸುಂಟೆ'ಂದು ಪರಿಣಾಮಿಸಿದಡೆ
ನಿಮಗಾನು ದ್ರೋಹಿಯಯ್ಯಾ, ಕೂಡಲಸಂಗಮದೇವಾ.
ನಿಮ್ಮ ಶರಣರ ಲೇಸೇ ಎನ್ನ ಲೇಸಯ್ಯಾ.

***

ಮಾಡುವಂತಿರಬೇಕು, ಮಾಡದಂತಿರಬೇಕು,
ಮಾಡುವ ಮಾಟದೊಳಗೆ ತಾನಿಲ್ಲದಿರಬೇಕು.
ಕೂಡಲಸಂಗಮದೇವರ ನೋಡುತ್ತ ನೋಡುತ್ತ
ನೋಡದಂತಿರ ಬೇಕು.

***

ಎದೆ ಬಿರಿವನ್ನಕ್ಕ ಮನದಣಿವನ್ನಕ್ಕ
ನಾಲಿಗೆ ನಲಿನಲಿದಾಡುವನ್ನಕ್ಕ ನಿಮ್ಮ
ನಾಮಾಮೃತವ ತಂದೆರೆಸು ಕಂಡಯ್ಯಾ ಎನಗೆನ್ನ ತಂದೇ !
ಬಿರಿಮುಗಳಂದದಿ ಎನ್ನ ಹೃದಯ ನಿಮ್ಮ
ಶ್ರೀ ಚರಣದ ಮೇಲೆ ಬಿದ್ದರಳುಗೆ,
ಕೂಡಲಸಂಗದೇವಾ.



ಆವನಾದರೇನು,
ಶ್ರೀ ಮಹಾದೇವನ ನೆನೆವವನ ಬಾಯ ತಂಬುಲ ಮೆಲುವೆ,
ಜಿಳುಡಿಗೆಯ ಹೊದೆವೆ,
ಪಾದರಕ್ಷೆಯ ಕಾಯ್ದು ಬದುಕುವೆ ಕೂಡಲಸಂಗಮದೇವಾ.

***

ಒಪ್ಪವ ನುಡಿವರಯ್ಯಾ ತುಪ್ಪವ ತೊಡೆದಂತೆ !
ಶರಣ ತನ್ನ ಮರೆವನೆ ಜಿಸ್ನಾಣಿಯಂತೆ ?
ಕೂಡಲಸಂಗನ ಪ್ರಸಾದದಿಂದ ಬದುಕುವನಲ್ಲದೆ ತನ್ನ ಮರೆವನೆ ?

***

ಒಡಲ ಕಳವಳಕ್ಕೆ ಬಾಯ ಸವಿಗೆ ಬಯಸಿ ಉಂಡೆನಾದಡೆ,
ನಿಮ್ಮ ತೊತ್ತಿನ ಮಗನಲ್ಲಾ !
ಬೇಡ ಬೇಡೆ, ನಿಮ್ಮ ನಂಬಿದ ಸದ್ಭಕ್ತರ,
ಅವರೊಕ್ಕುದನುಂಬೆ, ಅವರೆಂದಂತೆ ಎಂಬೆ,
ಎನ್ನೊಡೆಯ ಕೂಡಲಸಂಗಮದೇವನೊಲ್ಲದವರ ಹಿಡಿದೆನಾದಡೆ
ನಿಮ್ಮ ಪಾದದಾಣೆ !

***

ಅಡಿಗಡಿಗೆ ಅಂಗವನಡರಿಯಡರಿ ನೋಡಿ ನೋಡಿ ಕಂಗಳು,
ಕಡೆಗೋಡಿ ವರಿದುವೆನಗಯ್ಯಾ ಎನ್ನಶ್ರುಜಲಂಗಳು.
ಆಲಿಕಲ್ಲ ರೂಹಿನಂತೆ; ಅರಗಿನ ಪುತ್ಥಳಿಯಂತೆ
ತನು ಪುಳಕಿತವಾದ ಬೆಮರು ಬಿಂದುಗಳೆಲ್ಲಾ !
ಕೂಡಲಸಂಗನ ದರ್ಶನಸ್ಪರ್ಶನದಿಂದ
ಮನವೊಲಿದು ನೆರೆವ ಭರವನೇನ ಹೇಳುವನಯ್ಯಾ !

ಜೋಳವಾಳಿಯಾನಲ್ಲ, ವೇಳೆವಾಳಿಯವ ನಾನಯ್ಯಾ,
ಹಾಳುಗೆಟ್ಟೋಡುವ ಆಳು ನಾನಲ್ಲಯ್ಯಾ,
ಕೇಳು ಕೂಡಲಸಂಗಮದೇವಾ, ಮರಣವೆ ಮಹಾನವಮಿ !

**

ಹೊನ್ನಿನೊಳಗೊಂದೊರೆಯ, ಸೀರೆಯೊಳಗೊಂದೆಳೆಯ
ಇಂದಿಂಗೆ ನಾಳಿಂಗ ಬೇಕೆಂದೆನಾದಡೆ, ನಿಮ್ಮಾಣೆ !
ನಿಮ್ಮ ಪುರಾತನರಾಣೆ !
ನಿಮ್ಮ ಶರಣರಿಗಲ್ಲದೆ ಮತ್ತೊಂದನರಿಯೆ ಕೂಡಲಸಂಗಮದೇವ.

***

ದಾಸಿ ಪುತ್ರನಾಗಲಿ ವೇಶ್ಯಾಪುತ್ರನಾಗಲಿ,
ಶಿವದೀಕ್ಷೆಯಾದ ಬಳಿಕ ಸಾಕ್ಷಾತು ಶಿವನೆಂದು ವಂದಿಸಿ ಪೂಜಿಸಿ
ಪಾದೋದಕ ಪ್ರಸಾದವ ಕೊಂಬುದೆ ಯೋಗ್ಯ.
ಹೀಗಲ್ಲದೆ ಉದಾಸೀನವ ಮಾಡಿ ಬಿಡುವವರಿಗೆ
ಪಂಚಮಹಾಪಾತಕ, ನರಕ ಕಾಣಾ ಕೂಡಲಸಂಗಮದೇವಾ.

***

ಎನಗೆ ನಿಮ್ಮ ನೆನೆಹಾದಾಗಲೆ ಉದಯ.
ಎನಗೆ ನಿಮ್ಮ ಮರಹಾದಾಗಲೆ ಅಸ್ತಮಾನ.
ಎನಗೆ ನಿಮ್ಮ ನೆನಹವೇ ಜೀವನ,
ಎನಗೆ ನಿಮ್ಮ ನೆನಹವೇ ಪ್ರಾಣ ಕಾಣಾ ತಂದೆ.
ಸ್ವಾಮಿ ! ಎನ್ನ ಹೃದಯದಲ್ಲಿ
ನಿಮ್ಮ ಚರಣದುಂಡಿಗೆಯ ನೊತ್ತಯ್ಯಾ,
ವದನದಲ್ಲಿ ಷಡಕ್ಷರಿಯ ಬರೆಯಯ್ಯ
ಕೂಡಲಸಂಗಮದೇವಾ.



ಕೆಂಚ ಕರಿಕನ ನೆನೆದಡೆ ಕರಿಕನಾಗಬಲ್ಲನೆ ?
ಕರಿಕ ಕೆಂಚನ ನೆನೆದಡೆ ಕೆಂಚನಾಗಬಲ್ಲನೆ ?
ದರಿದ್ರ ಸಿರಿವಂತನ ನೆನೆದಡೆ ಸಿರಿವಂತನಾಗಬಲ್ಲನೆ ?
ಸಿರಿವಂತ ದರಿದ್ರನ ನೆನೆದಡೆ ದರಿದ್ರನಾಗಬಲ್ಲನೆ ?
ಮುನ್ನಿನ ಪುರಾತನರ ನೆನೆದು ಧನ್ಯನಾದಹೆನೆಂಬ
ಮಾತಿನ ರಂಜಕರನೇನೆಂಬೆ ಕೂಡಲಸಂಗಮದೇವಾ ?

***

ಅಳೆಯುತ್ತ ಅಳೆಯುತ್ತ ಬಳಲುವರಲ್ಲದೆ, ಕೊಳಗ ಬಳಲುವುದೆ ?
ನಡೆಯುತ್ತ ನಡೆಯುತ್ತ ಬಳಲುವರಲ್ಲದೆ, ಬಟ್ಟೆ ಬಳಲುವುದೆ ?
ಶ್ರಮವ ಮಾಡುತ್ತ ಮಾಡುತ್ತ ಬಳಲುವರಲ್ಲದೆ, ಅಂಗ ಬಳಲುವುದೇ ?
ನಿಜವನರಿಯದ ಭಕ್ತ ಬಳಲುವನಲ್ಲದೆ, ಅಂಗ ಬಳಲುವುದೇ ?
ಕೂಡಲಸಂಗಮದೇವಾ ; ಅರಸರಿಯದ ಬಿಟ್ಟಿಯೊ !

***

ಪಾಪಿಯ ಧನ ಪ್ರಾಯಶ್ಚಿತ್ತಕ್ಕಲ್ಲದೆ
ಸತ್ ಪಾತ್ರಕ್ಕೆ ಸಲ್ಲದಯ್ಯಾ !
ನಾಯ ಹಾಲು ನಾಯಿಗಲ್ಲದೆ
ಪಂಚಾಮೃತಕ್ಕೆ ಸಲ್ಲದಯ್ಯಾ !
ನಮ್ಮ ಕೂಡಲಸಂಗನ ಶರಣರಿಗಲ್ಲದೆ
ಮಾಡುವ ಅರ್ಥ ವ್ಯರ್ಥ ಕಂಡಯ್ಯಾ !

***

ಕಾಳಿದಾಸಂಗೆ ಕಣ್ಣ ನಿತ್ತೆ,
ಓಹಿಲಯ್ಯನ ನಿಜಪುರಕ್ಕೊಯಿದೆ:
ನಂಬಿ ಕರೆದೊಡೋ ಎಂದೆ,
ತೆಲುಗ ಬೊಮ್ಮಯ್ಯಂಗೆ ಒಲಿದೆ ದೇವಾ.
ಕೂಡಲಸಂಗಮದೇವಾ, ಎನ್ನನೇಕೆ ಒಲ್ಲೆಯ್ಯಾ ?

ಕರಗಿಸಿ ಎನ್ನ ಮನದ ಕಾಳಿಕೆಯ ಕಳೆಯಯ್ಯಾ !
ಒರೆ ಬಣ್ಣಕ್ಕೆ ತಂದೆನ್ನ ಪುಟವಿಕ್ಕಿ ನೋಡಯ್ಯಾ !
ಕಡಿಹಕ್ಕೆ ಬಡಿಹಕ್ಕೆ ತಂದೆನ್ನ ಕಡೆಯಾಣಿಯ ಮಾಡಿ,
ನಿಮ್ಮ ಶರಣರ ಪಾದಕ್ಕೆ ತೊಡಿಗೆಯ ಮಾಡಿ ಸಲಹು
ಕೂಡಲಸಂಗಮದೇವಾ !

***

ಸಗಣಿಯ ಬೆನಕಂಗೆ ಸಂಪಗೆಯರಳಲ್ಲಿ ಪೂಜಿಸಿದಡೆ
ರಂಜನೆಯಿಲ್ಲದೆ ಅದರ ಗಂಜಳ ಬಿಡದಣ್ಣಾ
ಮಣ್ಣ ಪುತ್ಥಳಿಯ ಮಾಣದೆ ಜಲದಲ್ಲಿ ತೊಳೆದಡೆ
ನಿಚ್ಚ ನಿಚ್ಚಕ್ಕೆ ಕೆಸರಹುದಲ್ಲದೆ ಅದರಚ್ಚುಗ ಬಿಡದಣ್ಣಾ !
ಲೋಕದ ಮಾನವಂಗೆ ಶಿವದೀಕ್ಷೆಯ ಕೊಟ್ಟಡೆ
ಕೆಟ್ಟವನೇಕೆ ಶಿವಭಕ್ತನಹನು ಕೂಡಲಸಂಗಮದೇವಾ ?

***

ಉದಕದೊಳಗೆ ಬೈಚಿಟ್ಟ ಬೈಕೆಯ ಕಿಚ್ಚಿನಂತೆ ಇದ್ದಿತು !
ಸಸಿಯೊಳಗಣ ರಸದ ರುಚಿಯಂತೆ ಇದ್ದಿತ್ತು !
ನನೆಯೊಳಗಣ ಪರಿಮಳದಂತೆ ಇದ್ದಿತ್ತು !
ಕೂಡಲ ಸಂಗಮದೇವರ ನಿಲವು -
ಕನ್ನೆಯ ಸ್ನೇಹದಂತೆ ಇದ್ದಿತ್ತು ॥

***

ಭಕ್ತಿಯೆಂಬ ಪೃಥ್ವಿಯ ಮೇಲೆ ಗುರುವೆಂಬ ಬೀಜವಂಕುರಿಸಿ
ಲಿಂಗವೆಂಬ ಎಲೆಯಾಯಿತ್ತು, ಲಿಂಗವೆಂಬ ಎಲೆಯ ಮೇಲೆ
ವಿಚಾರವೆಂಬ ಹೂವಾಯಿತ್ತು, ಆಚಾರವೆಂಬ ಕಾಯಾಯಿತ್ತು
ನಿಷ್ಪತ್ತಿಯೆಂಬ ಹಣ್ಣಾಯಿತ್ತು,
ನಿಷ್ಪತ್ತಿಯೆಂಬ ಹಣ್ಣು ತೊಟ್ಟು ಕಳಚಿ ಬೀಳುವಲ್ಲಿ
ಕೂಡಲಸಂಗಮದೇವ ತನಗೆ ಬೇಕೆಂದು ಎತ್ತಿ ಕೊಂಡ.



ಶೂಲದ ಮೇಲಣ ವಿಭೋಗವೇನಾದೊಡೇನೊ ?
ನಾನಾವರ್ಣದ ಸಂಸಾರ ಹಾವು ಹಾವಾಡಿಗನ ಸ್ನೇಹದಂತೆ !
ತನ್ನಾತ್ಮ ತನಗೆ ಹಗೆಯಾದ ಬಳಿಕ ಬಿನ್ನಾಣವುಂಟೆ
ಮಹಾದಾನಿ ಕೂಡಲಸಂಗಮದೇವಾ ?

***

ಚಂದ್ರಮನಂತೆ ಕಳೆ ಸಮನಿಸಿತ್ತೆನಗೆ.
ಸಂಸಾರವೆಂಬ ರಾಹು ಸರ್ವಗ್ರಾಸಿಯಾಗಿ ನುಂಗಿತ್ತಯ್ಯಾ !
ಇಂದೆನ್ನ ದೇಹಕ್ಕೆ ಗ್ರಹಣವಾಯಿತ್ತು,
ಇನ್ನೆಂದಿಗೆ ಮೋಕ್ಷವಹುದೋ ಕೂಡಲಸಂಗಮದೇವಾ ?

***

ಕಾಂಚನವೆಂಬ ನಾಯ ನಚ್ಚಿ,
ನಿಮ್ಮ ನಾನು ಮರೆದೆನಯ್ಯಾ !
ಕಾಂಚನಕ್ಕೆ ವೇಳೆಯಲ್ಲದೆ, ಲಿಂಗಕ್ಕೆ ವೇಳೆಯಿಲ್ಲಾ !
ಹಡಿಕೆಗೆ ಮೆಚ್ಚಿದ ಸೊಣಗ ಅಮೃತದ ಸವಿಯ ಬಲ್ಲುದೆ
ಕೂಡಲಸಂಗಮದೇವಾ ?

***

ಎತ್ತೆತ್ತ ನೋಡಿದತ್ತ ನೀನೇ ದೇವಾ.
ಸಕಲವಿಸ್ತಾರದ ರೂಹು ನೀನೇ ದೇವಾ.
ವಿಶ್ವತಸ್ಚಕ್ಷು ನೀನೇ ದೇವಾ.
ವಿಶ್ವತೋಮುಖ ನೀನೇ ದೇವಾ.
ವಿಶ್ವತೋಬಾಹು ನೀನೇ ದೇವಾ.
ವಿಶ್ವತಃಪಾದ ನೀನೇ ದೇವಾ.
ಕೂಡಲಸಂಗಮದೇವಾ.

ಮರನನೇರಿದ ಮರ್ಕಟನಂತೆ ಹಲವು ಕೊಂಬೆಗೆ ಹಾಯುತ್ತಿದೆ:
ಬೆಂದ ಮನವ ನಾನೆಂತು ನಂಬುವೆನಯ್ಯಾ ?
ಎಂತು ನಚ್ಚುವೆನಯ್ಯ ?
ಎನ್ನ ತಂದೆ ಕೂಡಲಸಂಗಮದೇವನಲ್ಲಿಗೆ ಹೋಗಲೀಯದಯ್ಯಾ!

***

ನಾನೊಂದ ನೆನೆದೊಡೆ ತಾನೊಂದ ನೆನೆವುದು :
ನಾನಿತ್ತಲೆಳೆದಡೆ ತಾನತ್ತಲೆಳೆವುದು :
ತಾ ಬೇರೆಯನ್ನನಳಲಿಸಿ ಕಾಡಿತ್ತು :
ತಾ ಬೇರೆಯೆನ್ನ ಬಳಲಿಸಿ ಕಾಡಿತ್ತು :
ಕೂಡಲಸಂಗನ ಕೂಡಿಹೆನೆಂದಡೆ
ತಾನೆನ್ನ ಮುದುಗೆಡಿಸಿತ್ತು ಮಾಯೆ !

***

ಶ್ರೀ ವಿಭೂತಿಯ ಪೂಸದವರ
ಶ್ರೀ ರುದ್ರಾಕ್ಷಿಯ ಧರಿಸದವರ
ನಿತ್ಯ ಲಿಂಗಾರ್ಚನೆಯ ಮಾಡದವರ
ಜಂಗಮವೇ ಲಿಂಗವೆಂದರಿಯದವರ
ಸದ್ಭಕ್ತರ ಸಂಗದಲ್ಲಿರದವರ-
ಎನಗೊಮ್ಮೆ ತೋರದಿರಯ್ಯ ಕೂಡಲ ಸಂಗಮದೇವ
ಸೆರಗೊಡ್ಡಿ ಬೇಡುವೆನು ॥

***

ಹಾವಿನ ಡೊಂಕ ಹುತ್ತಕ್ಕೆ ಸಸಿನ.
ನದಿಯ ಡೊಂಕು ಸಮುದ್ರಕ್ಕೆ ಸಸಿನ.
ನಮ್ಮ ಕೂಡಲಸಂಗನ ಶರಣರ ಡೊಂಕು ಲಿಂಗಕ್ಕೆ ಸಸಿನ !



ಹಾವಿನ ಬಾಯ ಕಪ್ಪೆ ಹಸಿದು
ತಾ ಹಾರುವ ನೊಣಕಾಸೆ ಮಾಡುವಂತೆ
ಶೂಲವನೇರುವ ಕಳ್ಳ ಹಾಲು ತುಪ್ಪವ ಕುಡಿದು
ಮೇಲಿನ್ನೇಸು ಕಾಲ ಬದುಕುವನೋ ?
ಕೆಡುವೊಡಲ ನೆಚ್ಚಿ
ಕಡು ಹುಸಿಯನೇ ಹುಸಿದು
ಒಡಲ ಹೊರೆವರ ಮೆಚ್ಚ
ನಮ್ಮ ಕೂಡಲ ಸಂಗಮದೇವ ॥

***

ಅವಳ ವಚನ ಬೆಲ್ಲದಂತೆ
ಹೃದಯದಲ್ಲಿಪ್ಪುದು ನಂಜು ಕಂಡಯ್ಯ !
ಕಂಗಳಲೊಬ್ಬನ ಕರೆವಳು
ಮನದಲೊಬ್ಬನ ನೆನೆವಳು
ಕೂಡಲಸಂಗಮ ದೇವಯ್ಯ ಕೇಳಯ್ಯ
ಮಾನಿಸಗಳ್ಳಿಯ ನಂಬದಿರಯ್ಯ ॥

***

ಹಾಲ ತೊರೆಗೆ ಬೆಲ್ಲದ ಕೆಸರು, ಸಕ್ಕರೆಯ ಮಳಲು,
ತವರಾಜನ ನೊರೆತೊರೆಯಂತೆ ಆದ್ಯರ ವಚನವಿರಲು,
ಬೇರೆ ಬಾವಿಯ ತೋಡಿ, ಉಪ್ಪು ನೀರನಂಬುವನ ವಿಧಿಯಂತೆ
ಆಯಿತ್ತೆನ್ನ ಮತಿ ಕೂಡಲಸಂಗಮದೇವಾ.

***

ಮರೀಚಿಯೊಳಡಗಿದ ಬಿಸಿಲನಂತಿದ್ದಿತ್ತು,
ಕ್ಷೀರದೊಳಗಣ ತುಪ್ಪದಂತೆ ಇದ್ದಿತ್ತು,
ಚಿತ್ರಕನೊಳಡಗಿದ ಚಿತ್ರಪಟದಂತಿದ್ದಿತ್ತು,
ಆಲಿಯೊಳಗಣ ತೇಜದ ಗೋಪ್ಯದಂತಿದ್ದಿತ್ತು,
ನುಡಿಯೊಳಗಡಗಿದ ಅರ್ಥದಂತೆ ಇದ್ದಿತ್ತು -
ಕೂಡಲಸಂಗಯ್ಯಾ, ನಿಮ್ಮ ನಿಲವು.

ಕರಿಯಂಜುವುದಂಕುಶಕ್ಕಯ್ಯಾ :
ಗಿರಿಯಂಜುವುದು ವಜ್ರಕ್ಕಯ್ಯಾ :
ತಮಂಧವಂಜುವುದು ಜ್ಯೋತಿಗಯ್ಯಾ :
ಕಾನನವಂಜುವುದು ಬೇಗೆಗಯ್ಯಾ :
ಪಂಚಮಹಾಪಾತಕ ಂಜುವುದು
ಕೂಡಲಸಂಗನ ನಾಮಕ್ಕಯ್ಯಾ.

***

ಎಲ್ಲರ ಗಂಡರ ಪರಿಯಂತಲ್ಲ ನೋಡವ್ವಾ.
ನಮ್ಮ ನಲ್ಲ ಸುಳಿಯಲಿಲ್ಲ :
ಸುಳಿದು ಸಿಂಗಾರವ ಮಾಡಲಿಲ್ಲ !
ಕೂಡಲಸಂಗಮದೇವನು ತನ್ನೊಳಗೆ ಬೈಚಿಟ್ಟನಾಗಿ.

***

ಮರಕ್ಕೆ ಬಾಯಿ ಬೇರೆಂದು ತಳಕ್ಕೆ ನೀರೆರೆದಡೆ
ಮೇಲೆ ಪಲ್ಲವಿಸಿತ್ತು ನೋಡಾ !
ಲಿಂಗದ ಬಾಯಿ ಜಂಗಮವೆಂದು ಪಡಿಪದಾರ್ಥವ ನೀಡಿದಡೆ
ಮುಂದೆ ಸಕಲ ಪದಾರ್ಥವನೀವನು !
ಆ ಜಂಗಮನ ಹರನೆಂದು ಕಂಡು ನರನೆಂದು ಭಾವಿಸಿದಡೆ
ನರಕ ತಪ್ಪದು ಕಾಣಾ ಕೂಡಲಸಂಗಮದೇವಾ !

***

ನೆರೆ ಕೆನ್ನೆಗೆ ತೆರೆ ಗಲ್ಲಕೆ ಶರೀರ ಗೂಡುವೋಗದ ಮುನ್ನ,
ಹಲ್ಲು ಹೋಗಿ ಬೆನ್ನು ಬಾಗಿ ಅನ್ಯರಿಗೆ ಹಂಗಾಗದ ಮುನ್ನ,
ಕಾಲಮೇಲೆ ಕೈಯನೂರಿ ಕೋಲ ಹಿಡಿಯದ ಮುನ್ನ,
ಮುಪ್ಪಿಂದೊಪ್ಪವಳಿಯದ ಮುನ್ನ,
ಮೃತ್ಯು ಮುಟ್ಟದ ಮುನ್ನ
ಪೂಜಿಸು ನಮ್ಮ ಕೂಡಲಸಂಗಮದೇವನ.



ಉಂಬ ಬಟ್ಟಲು ಬೇರೆ ಕಂಚಲ್ಲ,
ನೋಡುವ ದರ್ಪಣ ಬೇರೆ ಕಂಚಲ್ಲ,
ಭಾಂಡ ಒಂದೆ, ಭಾಜನ ಒಂದೆ, ಬೆಳಗೆ ಕನ್ನಡಿಯೆನಿಸಿತ್ತಯ್ಯಾ !
ಅರಿದಡೆ ಶರಣ, ಮರೆದಡೆ ಮಾನವ.
ಮರೆಯದೆ ಪೂಜಿಸು ಕೂಡಲಸಂಗಯ್ಯನ.

***

ಹೊಯ್ದರೆ ಹೊಯ್ಗಳು ಕೈಯ ಮೇಲೆ :
ಬಯ್ದರೆ ಬಯ್ಗಳು ಕೈಯ ಮೇಲೆ
ಹಿಂದಣ ಜನನವೇನಾದೊಡಾಗಲಿ -
ಇಂದಿನ ಭೋಗವು ಕೈಯ ಮೇಲೆ !
ಕೂಡಲಸಂಗಮದೇವಯ್ಯಾ,
ನಿಮ್ಮ ಪೂಜಿಸಿದ ಫಲ ಕೈಯ ಮೇಲೆ !

***

ಗಿಳಿಯೋದಿ ಫಲವೇನು -
ಬೆಕ್ಕು ಬಹುದ ಹೇಳಲರಿಯದು
ಜಗವೆಲ್ಲವ ಕಾಂಬ ಕಣ್ಣು -
ತನ್ನ ಕೊಂಬ ಕೊಯ್ಲೆಯ ಕಾಣಲರಿಯದು
ಇದಿರ ಗುಣವ ಬಲ್ಲೆವೆಂಬರು
ತಮ್ಮ ಗುಣವ ತಾವರಿಯರು-ಕೂಡಲ ಸಂಗಮದೇವ ॥

***

ಹರನೀವ ಕಾಲಕ್ಕೆ ಸಿರಿಯು ಬೆನ್ನಲ್ಲಿ ಬರ್ಕು -
ಹರಿದು ಹೆದ್ದೊರೆಯೆ ಕೆರೆ ತುಂಬಿದಂತಯ್ಯಾ !
ನೆರೆಯದ ವಸ್ತು ನೆರೆವುದು ನೋಡಯ್ಯಾ,
ಅರಸು ಪರಿವಾರ ಕೈವಾರ ನೋಡಯ್ಯಾ !
ಪರಮ ನಿರಂಜನನೆ ಮರೆದ ಕಾಲಕ್ಕೆ
ತುಂಬಿದ ಹರವಿಯ ಕಲ್ಲು ಕೊಂಡಂತೆ
ಕೂಡಲಸಂಗಮದೇವಾ !

ಆತ್ಮಸ್ತುತಿ ಪರನಿಂದೆಯ ಕೇಳಿಸದಿರಯ್ಯ ನಿಮ್ಮ ಧರ್ಮ !
ಆನು ಭಕ್ತನೆನ್ನಲ್ಲಿ ಲೇಸುಂಟೆಂದು ಪರಿಣಾಮಿಸಿದಡೆ
ನಿಮಗಾನು ದ್ರೋಹಿಯಯ್ಯ
ಕೂಡಲ ಸಂಗಮದೇವ-
ನಿಮ್ಮ ಶರಣಗ. ಲೇಸೇ ಎನ್ನ ಲೇಸಯ್ಯ ॥

***

ಲೇಸ ಕಂಡು ಮನ ಬಯಸಿ ಬಯಸಿ
ಆಸೆ ಮಾಡಿದೊಡಿಲ್ಲ ಕಂಡಯ್ಯಾ
ತಾಳಮರಕ್ಕೆ ಕೈಯ ನೀಡಿ
ಮೇಲೆ ನೋಡಿ ಗೋಣು ನೊಂದುದಯ್ಯಾ.
ಕೂಡಲಸಂಗಮದೇವಾ, ಕೇಳಯ್ಯಾ,
ನೀವೀವ ಕಾಲಕಲ್ಲದಿಲ್ಲ ಕಂಡಯ್ಯಾ

***

ಕೆಲಕ್ಕೆ ಶುದ್ಧನಾದೆನಲ್ಲದೆ,
ಎನ್ನ ಮನಕ್ಕೆ ಶುದ್ಧನಾಗೆನೇಕಯ್ಯಾ ?
ಕೈಯ ಮುಟ್ಟಿ ಪೂಜಿಸುವರೆ,
ಎನ್ನ ಕೈ ಶುದ್ಧವಲ್ಲವಯ್ಯಾ.
ಮನ ಮುಟ್ಟಿ ಪೂಜಿಸುವರೆ,
ಎನ್ನ ಮನ ಶುದ್ಧವಲ್ಲವಯ್ಯಾ
ಭಾವ ಶುದ್ಧವಾದೊಡೆ ಕೂಡಲಸಂಗಯ್ಯನು
'ಇತ್ತ ಬಾ' ಎಂದೆತ್ತಿಕೊಳ್ಳನೇಕಯ್ಯಾ ?

***

ಕುರಿಬಿಂಡು ಕಬ್ಬಿನ ಉಲಿವ ತೋಂಟವ ಹೊಕ್ಕು
ತೆರನರಿಯದೆ ತನಿರಸದ ಹೊರಗಣೆಲೆಯನೆ ಮೇದುವು !
ನಿಮ್ಮನರಿವ ಮದಕರಿಯಲ್ಲದೆ ಕುರಿಬಲ್ಲುದೆ
ಕೂಡಲಸಂಗಮದೇವಾ ?



ಚಂದ್ರೋದಯಕ್ಕೆ ಅಂಬುಧಿ ಹೆಚ್ಚುವುದಯ್ಯಾ :
ಚಂದ್ರ ಕುಂದೆ ಕುಂದುವುದಯ್ಯಾ.
ಚಂದ್ರಂಗೆ ರಾಹುವಡ್ಡ ಬಂದಲ್ಲಿ ಅಂಬುಧಿ ಬೊಬ್ಬಿಟ್ಟಿತ್ತೆ ?
ಅಂಬುಧಿಯ ಮುನಿಯಾಪೋಷಣವ ಕೊಂಬಲ್ಲಿ,
ಚಂದ್ರಮನಡ್ಡ ಬಂದನೆ ?
ಆರಿಗಾರೂ ಇಲ್ಲಾ, ಕೆಟ್ಟವಂಗೆ ಕೆಳೆಯಿಲ್ಲಾ !
ಜಗದ ನಂಟ ನೀನೆ ಅಯ್ಯಾ ಕೂಡಲಸಂಗಮದೇವಾ.

***

ನೆಲವೊಂದೆ ಹೊಲೆಗೇರಿ ಶಿವಾಲಯಕ್ಕೆ
ಜಲವೊಂದೆ ಶೌಚಾಚಮನಕ್ಕೆ
ಕುಲವೊಂದೆ ತನ್ನ ತಾನರಿದವಂಗೆ.
ಫಲವೊಂದೆ ಷಡುದರುಷನ ಮುಕ್ತಿಗೆ.
ನಿಲವೊಂದೆ - ಕೂಡಲಸಂಗಮದೇವಾ, ನಿಮ್ಮನರಿದವಂಗೆ.

***

ಎನ್ನ ತಪ್ಪು ಅನಂತಕೋಟಿ
ನಿಮ್ಮ ಸೈರಣೆಗೆ ಲೆಕ್ಕವಿಲ್ಲಾ !
ಇನ್ನು ತಪ್ಪಿದೆನಾದರೆ ನಿಮ್ಮ ಪಾದವೇ ದಿಬ್ಯ !
ಕೂಡಲಸಂಗಮದೇವಯ್ಯಾ !
ನಿಮ್ಮ ಪ್ರಮಥರ ಮುಂದೆ
ಕಿನ್ನರ ಬೊಮ್ಮಣ್ಣನೆ ಸಾಕ್ಷಿ

***

ಬ್ರಹ್ಮ ಪದವಿಯನೊಲ್ಲೆ,
ವಿಷ್ಣು ಪದವಿಯನೊಲ್ಲೆ,
ರುದ್ರ ಪದವಿಯನೊಲ್ಲೆ,
ಮತ್ತಾವ ಪದವಿಯನೊಲ್ಲೆನಯ್ಯಾ
ಕೂಡಲಸಂಗಮದೇವಾ,
ನಿಮ್ಮ ಸದ್ಭಕ್ತರ ಪಾದವನರಿದಿಪ್ಪ
ಮಹಾ ಪದವಿಯನೆ ಕರುಣಿಸಯ್ಯಾ.

ನಚ್ಚಿದೆನೆಂದರೆ, ಮೆಚ್ಚಿದೆನೆಂದರೆ,
ಸಲೆ ಮಾರುವೋದೆನೆಂದರೆ,
ತನುವಲ್ಲಾಡಿಸಿ ನೋಡುವೆ ನೀನು,
ಮನವಲ್ಲಾಡಿಸಿ ನೋಡುವೆ ನೀನು,
ಧನವಲ್ಲಾಡಿಸಿ ನೋಡುವೆ ನೀನು,
ಇದಕ್ಕೆಲ್ಲ ಅಂಜದಿದ್ದರೆ,
ಭಕ್ತಿ ಕಂಪಿತ ನಮ್ಮ ಕೂಡಲಸಂಗಮದೇವ.

***

ಸಂಗಸಹಿತ ಶರಣರು ಬಂದರೆ
ನಂಬುವುದೆನ್ನ ಮನವು,
ಹಾವು ನೇಣೆಂಬ ಭ್ರಾಂತುಳ್ಳನ್ನಕ್ಕ
ನಾನು ಭಕ್ತನೆಂತಪ್ಪೆನು ?
ಅಂಗ ಲಿಂಗಸಹಿತವಾಗಿ ಬಂದರೆ ಸಂಗ ನೀನೆಂದು,
ಮತ್ತೆ ಮನದಲ್ಲಿ ಸಂದೇಹ ಹೊಳೆದರೆ
ಬೆಂದೆನಲ್ಲಾ ನಾನು ಕೂಡಲಸಂಗಮದೇವಾ !

***

ಹರಿವ ನದಿಯ ತೆರನ ಹೋಲಬಲ್ಲಡೆ ಭಕ್ತಿ :
ಕೂಡಿ ಸಯಿದಾನವ ನೀಡಬಲ್ಲಡೆ ಭಕ್ತಿ,
ನೀಡಿ ಮಿಕ್ಕುದ ಕಾಯ್ದು ಕೊಂಡಿರಬಲ್ಲಡೆ
ಕೂಡಿಕೊಂಡಿಪ್ಪ ಕೂಡಲಸಂಗಮದೇವ.

***

ಭಕ್ತಿಯೆಂಬುದ ಮಾಡಬಾರದು,
ಗರಗಸದಂತೆ ಹೋಗುತ್ತ ಕೊಯ್ವುದು, ಬರುತ್ತ ಕೊಯ್ವುದು !
ಘನಸರ್ಪನಲ್ಲಿ ಕೈದುಡುಕಿದರೆ ಹಿಡಿವುದು ಮಾಂಬುದೇ,
ಕೂಡಲಸಂಗಮದೇವಾ



ಅರೆವನಯ್ಯಾ ಸಣ್ಣವಹನ್ನಕ್ಕ
ಒರೆವನಯ್ಯಾ, ಬಣ್ಣ ಗಾಣ್ಬನ್ನಕ್ಕ
ಅರೆದರೆ ಸಣ್ಣವಾಗಿ
ಒರೆದರೆ ಬಣ್ಣವಾದರೆ
ಕೂಡಲಸಂಗಮದೇವನೊಲಿದು ಸಲಹುವನು.

***

ಎಲವೋ ಎಲವೋ ಪಾಪಕರ್ಮವ ಮಾಡಿದವನೇ
ಎಲವೋ ಎಲ-ೀೂ ಬ್ರಹ್ಮಹತ್ಯದ ಮಾಡಿದವನೇ
ಒಮ್ಮೆ ಶರಣೆನ್ನೆಲವೋ
ಒಮ್ಮೆ ಶರಣೆಂದಡೆ ಪಾಪಕರ್ಮ ಓಡುವುದು
ಸರ್ವಪ್ರಾಯಶ್ಚಿತ್ತಕ್ಕೆ ಹೊನ್ನ ಪರ್ವತಂಗಳೆಯ್ದವು
ಓರ್ವಂಗೆ ಶರಣೆನ್ನು ನಮ್ಮ ಕೂಡಲ ಸಂಗಮದೇವಂಗೆ ॥

***

ಎಳ್ಳಿಲ್ಲದ ಗಾಣವನಾಡಿದ ಎತ್ತಿನಂತಾಯಿತ್ತೆನ್ನ ಭಕ್ತಿ,
ಉಪ್ಪು ಅಪ್ಪುವಿನಲ್ಲಿ ಅದ್ದಿ ಮೆಲಿಂದಂತಾಯಿತ್ತೆನ್ನ ಭಕ್ತಿ,
ಕೂಡಲಸಂಗಮದೇವಾ, ಆನು ಮಾಡಿದೆನೆಂಬೀ ಕಿಚ್ಚುಸಾಲದೆ ?

***

ಕಾಮವೇಕೋ ಲಿಂಗಪ್ರೇಮಿಯೆನಿಸುವಂಗೆ ?
ಕೋಪವೇಕೋ ಶರಣವೇದ್ಯನೆನಿಸುವಂಗೆ ?
ಲೋಭವೇಕೋ ಭಕ್ತಿಲಾಭವ ಬಯಸುವಂಗೆ ?
ಮೋಹವೇಕೋ ಪ್ರಸಾದವೇದ್ಯನೆನಿಸುವಂಗೆ ?
ಮದಮತ್ಸರವುಳ್ಳವಂಗೆ ಹೃದಯ ಶುದ್ಧವಲ್ಲಿಯದೋ ?
ಹದುಳಿಗರಾದಲ್ಲಿಪ್ಪ ಕೂಡಲ ಸಂಗಮದೇವ ॥

ಅಂತರಂಗದಲ್ಲಿ ಅರಿವಾದಡೇನಯ್ಯಾ,
ಬಹಿರಂಗದಲ್ಲಿ ಕ್ರಿಯೆಯಿಲ್ಲದನ್ನಕ್ಕರ ?
ದೇಹವಿಲ್ಲದಿರ್ದಡೆ ಪ್ರಾಣಕ್ಕಾಶ್ರಯವುಂಟೆ ?
ಕನ್ನಡಿಯಿಲ್ಲದಿರ್ದಡೆ ತನ್ನ ಮುಖವ ಕಾಣಬಹುದೆ ?
ಸಾಕಾರ ನಿರಾಕಾರ ಏಕೋ ದೇವ
ನಮ್ಮ ಕೂಡಲಸಂಗಮದೇವ.

***

ಅಂಗದಿಚ್ಛೆಗೆ ಮದ್ಯ ಮಾಂಸವ ತಿಂಬರು
ಕಂಗಳಿಚ್ಛೆಗೆ ಪರವಧುವ ನೆರೆವರು
ಲಿಂಗ ಲಾಂಛನಧಾರಿಯಾದಲ್ಲಿ ಫಲವೇನು ?
ಲಿಂಗಪಥವ ತಪ್ಪಿ ನಡೆವರು
ಜಂಗಮ ಮುಖದಿಂದ ನಿಂದೆ ಬಂದರೆ
ಕೊಂಡ ಮಾಲಿಂಗೆ ಹೋಹುದು ತಪ್ಪದು
ಕೂಡಲಸಂಗಮದೇವ ॥

***

ತನಗೆ ಮುನಿವರಿಗೆ ತಾ ಮುನಿಯಲೇಕಯ್ಯ ?
ತನಗಾದ ಆಗೇನು ಅವರಿಗಾದ ಚೇಗೇನು ?
ತನುವಿನ ಕೋಪ ತನ್ನ ಹಿರಿಯತನದ ಕೇಡು
ಮನದ ಕೋಪ ತನ್ನ ಅರಿವಿನ ಕೇಡು
ಮನೆಯೊಳಗಣ ಕಿಚ್ಚು ಮನೆಯ ಸುಟ್ಟಲ್ಲದೆ
ನೆರೆಮನೆಯ ಸುಡದು ಕೂಡಲ ಸಂಗಮದೇವ ॥

***

ಭಕ್ತನ ಮುಖದರ್ಪಣದಲ್ಲಿ ಲಿಂಗವ ಕಾಣಬಹುದು
ಭಕ್ತ ದೇಹಿಕ ದೇವ ಅನಿಮಿಷನಾಗಿ,
ಕೂಡಲಸಂಗಮದೇವ ಭಕ್ತನ ನುಡಿಯ ನಡುವೆ ರಾಶಿಯಾಗಿರ್ಪನು.